# ಆಧುನಿಕ ಕನ್ನಡ ಕಾವ್ಯ : ಮೊದಲ ಘಟ್ಟದ ವಿವಿಧ ನೆಲೆಗಳು

ಎಂ.ಫಿಲ್ ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಪ್ರೌಢ ಪ್ರಬಂಧ

ಸಂಶೋಧಕ
ಕೆ. ಶಿವಕುಮಾರ

ಮಾರ್ಗದರ್ಶಕರು
ಡಾ|| ರಹಮತ್ ತರೀಕೆರೆ

ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ

ಅಕ್ಟೋಬರ್ ೩೧ ೧೯೯೫

# ಆಧುನಿಕ ಕನ್ನಡ ಕಾವ್ಯ : ಮೊದಲ ಘಟ್ಟದ ವಿವಿಧ ನೆಲೆಗಳು

ಎಂ.ಫಿಲ್ ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಲ್ಲಿಸಿದ ಪ್ರೌಢ ಪ್ರಬಂಧ



ಸಂಶೋಧಕ

ಕೆ. ಶಿವಕುಮಾರ

ಮಾರ್ಗದರ್ಶಕರು

ಡಾ|| ರಹಮತ್ ತರೀಕೆರೆ

ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ

ಅಕ್ಟೋಬರ್ ೩೧ ೧೯೯೫



## : ಪ್ರಮಾಣ ಪತ್ರ :

"ಆಧುನಿಕ ಕನ್ನಡ ಕಾವ್ಯ: ಮೊದಲ ಘಟ್ಟದ ವಿವಿಧ ನೆಲೆಗಳು" ಎಂಬ ಶೀರ್ಷಿಕೆಯ ಪ್ರೌಢ ಪ್ರಬಂಧವನ್ನು, ಎಂ. ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ, ಡಾ|| ರಹಮತ್ ತರೀಕೆರೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ.

ದಿನಾಂಕ : ೩೧-೧೦-೯೫.
ಸ್ಥಳ : ವಿದ್ಯಾರಣ್ಯ.

ಕೆ. ಶಿವಕುಮಾರ್.
ಸಂಶೋಧನಾ ವಿದ್ಯಾರ್ಥಿ,
ಭಾಷಾ ನಿಕಾಯ,
ಕನ್ನಡ ವಿಶ್ವವಿದ್ಯಾಲಯ.
ಹಂಪಿ.

: ದೃಢೀಕರಣ ಪತ್ರ :

ಶ್ರೀ ಕೆ. ಶಿವಕುಮಾರ್ ಅವರು ''ಆಧುನಿಕ ಕನ್ನಡ ಕಾವ್ಯ : ಮೊದಲ ಘಟ್ಟದ ವಿವಿಧ ನೆಲೆಗಳು'' ಎಂಬ ಶೀರ್ಷಿಕೆಯ ಈ ಸಂಶೋಧನಾ ಪ್ರೌಢ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಅಥವಾ ಪ್ರಬಂಧದ ಯಾವುದೇ ಭಾಗವನ್ನು ಕೆ. ಶಿವಕುಮಾರ್ ಅವರು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ.

ದಿನಾಂಕ : ೩೦-೧೦-೧೯೯೫.
ಸ್ಥಳ : ವಿದ್ಯಾರಣ್ಯ.

ಡಾ|| ರಹಮತ್ ತರೀಕೆರೆ,
ರೀಡರ್,
ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ,
ಕನ್ನಡ ವಿಶ್ವವಿದ್ಯಾಲಯ,
ಹಂಪಿ.

## : ಕೃತಜ್ಞತೆಗಳು :

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಅಧ್ಯಯನ ಮಾಡುವುದಕ್ಕೆ ಅವಕಾಶ ನೀಡಿದ ಮಾನ್ಯ ಕುಲಪತಿಗಳಾದ ಡಾ|| ಚಂದ್ರಶೇಖರ ಕಂಬಾರ ಅವರಿಗೆ, ಹಾಗೂ ಕುಲಸಚಿವರಾದ ಡಾ|| ಕೆ.ವಿ.ನಾರಾಯಣ ಅವರಿಗೆ.

ನನ್ನನ್ನು ತಿದ್ದಿ, ತೀಡಿ, ತಾಳ್ಮೆಯಿಂದ ಮಾರ್ಗದರ್ಶನ ಮಾಡಿದ ಪ್ರೀತಿಯ ಗುರುಗಳಾದ ಡಾ|| ರಹಮತ್ ತರೀಕೆರೆ ಅವರಿಗೆ,

ಅಮೂಲ್ಯ ಮಾಹಿತಿಗಳ ಜೊತೆಗೆ ತುಂಬು ಪ್ರೀತಿಯನ್ನು ನೀಡಿದ ಗುರುಗಳಾದ ಮಲ್ಲೇಪುರಂ ಜಿ. ವೆಂಕಟೇಶ್, ಡಾ|| ಪುರುಷೋತ್ತಮ ಬಿಳಿಮಲೆ, ಡಾ|| ಎಚ್.ಎಸ್. ರಾಘವೇಂದ್ರರಾವ್, ಪ್ರೊ. ಓ.ಎಲ್. ನಾಗಭೂಷಣ ಸ್ವಾಮಿ, ಡಾ|| ಸತ್ಯನಾಥ್, ಪ್ರೊ.ಲಕ್ಷ್ಮಣ ತೆಲಗಾವಿ, ಡಾ|| ಶ್ರೀಮತಿ ವಾಸುಕಿ ಮತ್ತು ಬಿ.ಎಂ. ಪುಟ್ಟಯ್ಯರವರಿಗೆ,

ಅಮೂಲ್ಯ ಗ್ರಂಥಗಳನ್ನು ಒದಗಿಸಿಕೊಟ್ಟ ಗ್ರಂಥಾಲಯದ ಸಿಬ್ಬಂದಿ ವರ್ಗಕ್ಕೆ,

ಅಧ್ಯಯನದ ಕಷ್ಟ ಸುಖಗಳನ್ನು ಹಂಚಿಕೊಂಡ ಸಹಪಾಠಿಗಳಾದ ಕವಿತಾ, ಗುರು, ರಾಜು, ಶಿಗ್ಗ, ಮಂಜುಳಾ ಅವರಿಗೆ,

ಸದಾ ನನ್ನ ಓದಿನ ಕಾಳಜಿಯನ್ನು, ಕಳಕಳಿಯನ್ನು ಹೊತ್ತಿರುವ ಅಪ್ಪ, ಅಮ್ಮ, ಅಕ್ಕ ಮತ್ತು ಮಾವನವರಿಗೆ, ನನ್ನ ಅಧ್ಯಯನದ ಆಸಕ್ತಿ ಹೊತ್ತ ಗೋದಾವರಿಗೆ, ಪ್ರೀತಿಯ ತಂಗಿ ಮತ್ತು ತಮ್ಮಂದಿರಿಗೆ ಮತ್ತು ಎಲ್ಲಾ ಬಂಧುಗಳಿಗೆ,

ಕಡಿಮೆ ಸಮಯದಲ್ಲಿ ಅಚ್ಚುಕಟ್ಟಾಗಿ ಮುದ್ರಣ ಮಾಡಿಕೊಟ್ಟ 'ಸೂರ್ಯ'ಯವರಿಗೆ ತುಂಬು ಕೃತಜ್ಞತೆಗಳು.

ದಿನಾಂಕ: ೩೦-೧೦-೧೯೯೫.
ಸ್ಥಳ: ವಿದ್ಯಾರಣ್ಯ.

- ಕೆ. ಶಿವಕುಮಾರ್.
ಎಂ.ಫಿಲ್. ಸಂಶೋಧನಾ ವಿದ್ಯಾರ್ಥಿ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪರಿವಿಡಿ

------

## ಅಧ್ಯಯನದ ಉದ್ದೇಶ-ವ್ಯಾಪ್ತಿ-ಸ್ವರೂಪ

### (ಅ) ಹಿನ್ನೆಲೆ: ಉದ್ದೇಶ

ಸುಮಾರು ಹತ್ತು ಶತಮಾನಗಳಿಂದ ಕನ್ನಡ ಕಾವ್ಯವು ಎತ್ತೆತ್ತ ಪ್ರಭಾವಗಳಿಗೆ ಹಾಯುತ್ತ, ಅನೇಕ ರೂಪಗಳನ್ನು ಧರಿಸುತ್ತ, ತನ್ನತನವನ್ನು ಸಾಧಿಸಿಕೊಂಡು ಬಂದಿದೆ. ಕಳೆದ ಹಲವು ಶತಮಾನಗಳಲ್ಲಿ ಅದು ಪಡೆದುಕೊಂಡ ಪರಿವರ್ತನೆಗಳಿಗೆ ಹೋಲಿಸಿದರೆ, ೨೦ನೇ ಶತಮಾನದಲ್ಲಿ ಆಧುನಿಕಕಾಲದಲ್ಲಿ, ಅದು ಕಂಡು ಅನುಭವಿಸಿದ ಪರಿವರ್ತನೆಗಳು ಅಗಾಧವಾದವು, ತೀವ್ರವಾದವು. ಇದಕ್ಕೆ ಕಾರಣ 'ಆಧುನಿಕ' ವೆನ್ನುವ ಈ ಕಾಲಮಾನದಲ್ಲಿ ಸಂಭವಿಸಿದ ವಿದ್ಯಮಾನಗಳೇ ಆಗಿವೆ. ಹೀಗೆ ಸಮೃದ್ಧವೂ, ವೈವಿಧ್ಯವೂ, ಬಹುರೂಪಿಯೂ ಆದ ಆಧುನಿಕ ಕನ್ನಡ ಕಾವ್ಯದ ಧಾರೆಯು, ಸಾಂಪ್ರದಾಯಿಕವಾಗಿ ಬಂದ ತನ್ನ ಪರಂಪರೆಯೊಳಗೆ ಹೇಗೆ ಹುಟ್ಟಿತು, ಹೇಗೆ ಭಿನ್ನವಾಯಿತು ಎಂಬುದು ಇಲ್ಲಿನ ಪ್ರಶ್ನೆ. ಪ್ರಸ್ತುತ ಪ್ರಬಂಧವು, ೧೯ನೇ ಶತಮಾನದ ಕೊನೆಯ ಹಾಗೂ ೨೦ನೇ ಶತಮಾನದ ಮೊದಲ ವರ್ಷಗಳಲ್ಲಿ, 'ಆಧುನಿಕ' ಕನ್ನಡ ಕಾವ್ಯವು ಹುಟ್ಟು ಪಡೆಯುವ ಕ್ಷಣಗಳಲ್ಲಿ ಅನುಭವಿಸಿದ ತಲ್ಲಣ, ರೋಮಾಂಚನ, ಎದುರಿಸಿದ ಪ್ರತಿರೋಧ, ಪಡೆದ ಸ್ವಾಗತ, ಇವುಗಳನ್ನು ಶೋಧಿಸಲು ಯತ್ನಿಸುತ್ತದೆ.

ಒಂದು ಭಾಷೆಯೊಳಗೆ ಸಂಭವಿಸುವ ಬದಲಾವಣೆಗಳ ಮತ್ತು ಭಾಷೆಯಲ್ಲಿ ಹುಟ್ಟುವ ಸಾಹಿತ್ಯದ ಸಂಕಥನವೆಂದರೆ, ಅದು ಕೇವಲ ಸಾಹಿತ್ಯ ಚರಿತ್ರೆಯ ಸಂಗತಿಯಲ್ಲ. ಅದು ಒಂದು ನಾಡಿನ ಬದುಕು

ಸಾಮಾಜಿಕವಾಗಿ, ರಾಜಕೀಯವಾಗಿ ಯಾವೆಲ್ಲಾ ಬದಲಾವಣೆಗಳಿಗೆ ಒಳಪಟ್ಟಿತು ಎಂಬ ಚರಿತ್ರೆಯ ಸಂಗತಿಗೆ ಸಂಬಂಧಿಸಿದುದು ಕೂಡ ಆಗಿದೆ; ಮುಖ್ಯವಾಗಿ ಬ್ರಿಟೀಶರ ರಾಜಕೀಯ ಆಳ್ವಿಕೆಯೊಂದಿಗೆ ಬಂದ ಸಾಂಸ್ಕೃತಿಕ ಆಕೃತಿಗಳೊಂದಿಗೆ, ಈ ದೇಶದ ಸಂಸ್ಕೃತಿಯು ಜಗುಟುತನ, ಘರ್ಷಣೆ, ಸಮನ್ವಯ, ಸಂಕಟ, ಹೊಸಕುಟ್ಟು ಮೊದಲಾದ ಎಷ್ಟೋ ಪರಿಸ್ಥಿತಿಗಳಲ್ಲಿ ಮುಖಾಮುಖಿಗೈದ ಕಥನವಾಗಿದೆ. ಇದರಿಂದ ಈ ಪ್ರಬಂಧದಲ್ಲಿ 'ಆಧುನಿಕ' ಕನ್ನಡ ಕಾವ್ಯದ ಮೊದಲ ಘಟ್ಟದ ನೆಲೆಗಳನ್ನು ಆ ಕಾಲ-ಸಂದರ್ಭಗಳ ಸಾಂಸ್ಕೃತಿಕ ತಳಮಳಗಳೊಂದಿಗೆ ಇಟ್ಟು ವಿಶ್ಲೇಷಿಸಲು ಯತ್ನಿಸಲಾಗಿದೆ.

## (ಆ) ಅಧ್ಯಯನದ ವ್ಯಾಪ್ತಿ:

ಕನ್ನಡ ಕಾವ್ಯ ಮೊದಲ ಘಟ್ಟದ ವಿವಿಧ ನೆಲೆಗಳನ್ನು ಕುರಿತಂತೆ ಈ ವರೆಗೆ ಬಂದಿರುವ ವಿವೇಚನೆಯನ್ನು ವಿಸ್ತರಿಸುವ, ವಿಶ್ಲೇಷಿಸುವ, ಸಂಶೋಧಿಸುವ ಉದ್ದೇಶವನ್ನು ಈ ಅಧ್ಯಯನವು ಹೊಂದಿದೆ. ಅದಕ್ಕೆ ತಕ್ಕಂತೆ ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಲಾಗಿದೆ.

ಕನ್ನಡ ಕಾವ್ಯದ ಮೊದಲ ಘಟ್ಟದ ವಿವಿಧ ನೆಲೆಗಳ ಪರಿಕಲ್ಪನೆಗಳನ್ನು ಕುರಿತು ವಿಶ್ಲೇಷಿಸುವುದು, ಹೊತ್ತಿನಲ್ಲೇ ಆ ಘಟ್ಟದ ಕನ್ನಡ ಕಾವ್ಯವನ್ನು ಯಾವ ಕ್ರಮದಲ್ಲಿ ಇಲ್ಲಿಯವರೆಗೆ ಗ್ರಹಿಸಲಾಯಿತೆಂಬುದನ್ನು ವಿಶ್ಲೇಷಿಸುವುದು. ಇದುವರೆಗಿನ ಅಧ್ಯಯನಗಳ ತಾತ್ವಿಕ ನೆಲೆಗಳನ್ನು ಚಿಂತಿಸುವುದು, ಈ ಅಧ್ಯಯನದ ವ್ಯಾಪ್ತಿಗೆ ಬರುತ್ತದೆ. ಮುಖ್ಯವಾಗಿ ಮೊದಲ ಘಟ್ಟದ ಕನ್ನಡ ಕಾವ್ಯದ ಹಿಂದಿರುವ ತಾತ್ವಿಕ ಹಾಗೂ ಸಾಂಸ್ಕೃತಿಕ ನೆಲೆಗಳನ್ನು ಗ್ರಹಿಸುವುದು ಇಲ್ಲಿನ ಆಶಯವಾಗಿದೆ.

ನಂತರ ಪ್ರಧಾನವಾಗಿ ಮೊದಲ ಘಟ್ಟದ ಕನ್ನಡ ಕಾವ್ಯವು ಮುಂದಿನ ಘಟ್ಟದ ಕನ್ನಡ ಕಾವ್ಯದ ಮೇಲೆ ಗೈದ ಪ್ರಭಾವ ಮತ್ತು ಪ್ರೇರಣೆಗಳನ್ನು ವಿವಿಧ ಸ್ವರೂಪಗಳಲ್ಲಿ ಚರ್ಚಿಸಲಾಗುವುದು. ಒಟ್ಟಾರೆ ಕಾವ್ಯ ಸಂಸ್ಕೃತಿಯ ಬಹುಮುಖೀ ನೆಲೆಗಳ ಶೋಧನೆಯೇ ಪ್ರಸ್ತುತ ನಿಬಂಧದ ಉದ್ದೇಶವಾಗಿರುತ್ತದೆ.

(೩) ಅಧ್ಯಯನ ಸ್ವರೂಪ :

I. 'ಆಧುನಿಕ' ಕನ್ನಡ ಸಾಹಿತ್ಯದ ಹುಟ್ಟಿನ ಹಿನ್ನೆಲೆಯ ಚಾರಿತ್ರಿಕ ಒತ್ತಡಗಳು (ಕಾವ್ಯಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಒತ್ತು) ಹಾಗೇ 'ಆಧುನಿಕ' ಸಾಹಿತ್ಯವು ಮೊಳೆದೋರುತ್ತಿದ್ದ ಸಂದರ್ಭದಲ್ಲೂ 'ಸಾಂಪ್ರದಾಯಿಕ' ನೆಲೆಯಲ್ಲೇ ಕೃತಿರಚನೆ ಮಾಡುತ್ತಿದ್ದ ಕವಿಗಳು: ಇದಕ್ಕೆ ಪೂರಕವಾಗಿದ್ದ ಕನ್ನಡದ ಭಾಷಿಕ, ಪ್ರಾಂತೀಯ, ರಾಜಕೀಯ ಸನ್ನಿವೇಶಗಳು; ಈ 'ಸಾಂಪ್ರದಾಯಿಕ' ರಚನೆಗಳ ಹಿಂದಿರಬಹುದಾದ ಜಡತೆ ಹಾಗೂ ಜಗುಟುತನಗಳ ಸ್ವರೂಪ.

II. ೧೯ನೇ ಶತಮಾನದ ಕನ್ನಡದ ತೋಂಡಿ ಸಂಪ್ರದಾಯದ ಕಾವ್ಯ, ತತ್ವಪದಕಾರರು ಹಾಗೂ ಲಾವಣಿಕಾರರು 'ಆಧುನಿಕ'ತೆಯನ್ನು ಎದುರಿಸಿದ ಸ್ವೀಕರಿಸಿದ ಬಗೆಗಳು; 'ಆಧುನಿಕ' ವೆನ್ನಲಾಗುವ ಕನ್ನಡ ಕಾವ್ಯದಲ್ಲಿ ಎಳೆಮುರಿಯದೆ ಹರಿದ ಪರಂಪರೆಯ ಸತ್ವಗಳು -ಮುಖ್ಯವಾಗಿ ಲಾವಣಿ, ಮೊಹರಂ ಹಾಡುಗಳು, ಗೀಗೀ ಪದಗಳು.

III. ಕನ್ನಡ ಭಾಷೆ, ಸಾಹಿತ್ಯ, ಪರಂಪರೆಗಳಿಗೆ ಆಗಂತುಕರ ಪ್ರಯತ್ನಗಳು. ಮುಖ್ಯವಾಗಿ ಕ್ರೈಸ್ತ ಮಿಶನರಿಗಳ ಪ್ರಯತ್ನಗಳ ಹಿಂದಿನ ಉದ್ದೇಶ; ಅವರ ಪದ್ಯರಚನೆಯಲ್ಲಿ ಕನ್ನಡ ಭಾಷಾ ಬಳಕೆಯಲ್ಲಿನ ವೈಚಿತ್ರ್ಯಗಳ ಪರಿಶೀಲನೆ; ಆ ಪದ್ಯಗಳ ಸಾಂಸ್ಕೃತಿಕ ವಿಶ್ಲೇಷಣೆ.

IV. ಬ್ರಿಟೀಷ್ ಶಿಕ್ಷಣ ಹಾಗೂ ಇಂಗ್ಲೀಷ್ ಸಾಹಿತ್ಯ ಸಂಪರ್ಕದ ಒತ್ತಡಗಳು; ಇಂಗ್ಲೀಷ್ ಕಾವ್ಯದ ಅನುಕರಣೆ, ಅನುವಾದ, ರೂಪಾಂತರಗಳು; ಇವುಗಳ ಹಿಂದಿನ ಸಾಂಸ್ಕೃತಿಕ ಒತ್ತಾಸೆಗಳು- ಮುಖ್ಯವಾಗಿ ಎಸ್.ಜಿ. ನರಸಿಂಹಾಚಾರ್, ಹಟ್ಟಿಯಂಗಡಿ ನಾರಾಯಣರಾವ್, ಪಂಜೆ, ವೈ., ಶ್ರೀಯವರ ಪ್ರಯತ್ನಗಳು.

V. ಸ್ವತಂತ್ರ ಕವಿತಾ ರಚನೆಯ ಪ್ರಯತ್ನಗಳು; ಭಾಷೆ, ಛಂದಸ್ಸು, ಲಯಗಾರಿಕೆಯಲ್ಲಿನ ಅನೇಕ ಪ್ರಯೋಗಗಳು.

ಅಧ್ಯಾಯ - ೧

ಅನ್ಯರೊರೆದುದನೆ ಬರೆಬರೆದು.........

## ಆಧುನಿಕ ಪದದ ಪರಿಕಲ್ಪನೆ

'ಆಧುನಿಕ' ಈ ಪದದ ಬಳಕೆ ಅನೇಕ ರೀತಿಗಳಲ್ಲಿ ನಮ್ಮಲ್ಲಿ ಬಳಕೆಯಾಗುತ್ತಲಿದೆ. ಒಂದು ರೀತಿಯಲ್ಲಿ 'ಆಧುನಿಕ' ಅನ್ನುವ ಪದವೇ ಕೆಲವರಿಗೆ ಆಶಾವಾದದ ಬೆಳಕನ್ನು ಹಾಗೆಯೇ ಮತ್ತೆ ಅನೇಕರಿಗೆ ನಿರಾಶಾವಾದದ ನೆರಳನ್ನು ಕವಿಸಬಲ್ಲುದು. ಆಧುನಿಕ ಮನುಷ್ಯ, ಆಧುನಿಕ ಆಲೋಚನೆ, ಆಧುನೀಕರಣ ಆಧುನಿಕ ತಂತ್ರಜ್ಞಾನ, ಆಧುನಿಕ ಸಮಾಜ, ಆಧುನಿಕ ಸಾಹಿತ್ಯ. ಹೀಗೆ ಅನೇಕ ರೀತಿಯಲ್ಲಿ ಈ ಪದ ಇಂದು ಬಳಕೆಯಾಗುತ್ತಲಿದೆ.

'ಆಧುನಿಕ' ಮನುಷ್ಯನೆಂದಾಗ ಸಂಪ್ರದಾಯದ (ಪರಂಪರೆಯ) ಕೊಂಡಿಗಳನ್ನು ಸಡಿಲಿಸಿಕೊಂಡವನು ಎಂಬ ಅರ್ಥಕೊಳ್ಳದರೆ, 'ಆಧುನಿಕ' ಆಲೋಚನೆ ಎಂದಾಗ ಸಂಪ್ರದಾಯದ ಜಗುಟುತನಗಳನ್ನು ದಾಟಿ ವೈಚಾರಿಕವಾಗಿ ಯೋಚಿಸುವುದು ಎಂದರ್ಥವಾಗುತ್ತದೆ. 'ಆಧುನೀಕರಣ' ಎಂದರೆ ಹೊಸ ಹೊಸ ಆಲೋಚನೆ, ಸಂಶೋಧನೆಗಳ ಅಳವಡಿಕೆ ಎಂದರ್ಥವಾಗುತ್ತದೆ. ಆಧುನಿಕ ತಂತ್ರಜ್ಞಾನ ಎನ್ನುವ ಪದ ನಮ್ಮಲ್ಲೇ ಪೂರ್ವದಿಂದಲೂ ಇರುವ ಜಾನಪದ ಜ್ಞಾನವನ್ನು ತಳ್ಳಿಕೊಂಡು ಬಂದ ಜ್ಞಾನ, ವಿಜ್ಞಾನ, ತಂತ್ರಜ್ಞಾನಗಳ ಬಲವನ್ನು ಬಿಂಬಿಸುತ್ತದೆ.

'ಆಧುನಿಕ ಜಗತ್ತು' ಎಂದು ಕರೆಸಿಕೊಳ್ಳುವ ಇಂದಿನ ಸಮಾಜದೊಳಗೆ ನಿಂತು ಬರಹದ ಬಗ್ಗೆ ಯೋಚಿಸಿದಾಗ ಅದು ಬಹುತೇಕ ವೈಚಾರಿಕ ಆಲೋಚನೆಗೆ ಜಾಗ ನೀಡುವಂಥದ್ದಾಗಿದೆ. 'ಆಧುನಿಕತೆ' ಎಂಬುದು ವೈಜ್ಞಾನಿಕತೆಯನ್ನು ಹೊತ್ತು ನಿಂತದ್ದು. ಪಾಶ್ಚಿಮಾತ್ಯ ತತ್ತ್ವ - ಸಿದ್ಧಾಂತ-ಗ್ರಹಿಕೆಗಳನ್ನು ಅಳವಡಿಸಿಕೊಂಡಂಥದ್ದು ಎಂಬ ಅರ್ಥಗಳಲ್ಲೂ ಜಾರಿಯಲ್ಲಿದೆ. ಇದು ತೋರಿಕೆಗೆ ದೇಸೀಯ ಜ್ಞಾನದಿಂದ ಬೇರ್ಪಟ್ಟು ನಿಂತಂತೆ ಕಂಡರೂ, ಇಡೀ ಪರಂಪರೆಯನ್ನೇ ಸಂಪೂರ್ಣ ನಿರಾಕರಿಸಿ ಏಕಾಏಕಿಯಾಗಿ ಹುಟ್ಟಿಕೊಂಡದ್ದಲ್ಲ. ಪರಂಪರೆಗೂ 'ಆಧುನಿಕ' ಯೋಚನೆಗೂ ಒಂದು ರೀತಿಯ ಹೊಕ್ಕುಳ ಬಳ್ಳಿಯ ಸಂಬಂಧವಿದೆ. 'ಆಧುನಿಕ' ಗ್ರಹಿಕೆ ಗದ್ಯದಲ್ಲಿ ಪಡೆದಷ್ಟು ಜಾಗವನ್ನು ಪದ್ಯದಲ್ಲಿ ಪಡೆದಿಲ್ಲ ಎನಿಸಬಹುದು. ಬರಹದಲ್ಲಿ ಮತ್ತು ಯೋಚನೆಯಲ್ಲಿ ಈ ಬಗೆಯನ್ನು ಚಿಗುರಿಸಲು ರೆನೈಸಾನ್ಸ್ ಚಳುವಳಿ ಮತ್ತು ಅದರಿಂದ ಉಂಟಾದ ರಾಷ್ಟ್ರೀಯತೆ ಒಂದು ಕಾರಣವಾದರೆ, ಇದರ ಜೊತೆಗೆ ಭಾರತೀಯ ಅಧ್ಯಾತ್ಮ ಮತ್ತು ಅನುಭಾವ ಪರಂಪರೆ ಮತ್ತೊಂದು ಕಾರಣ. ನಮ್ಮ ಪರಂಪರೆಯೊಂದಿಗೆ ಬೆಸೆದುಕೊಂಡ ಇಂಗ್ಲೀಷ್ ಶಿಕ್ಷಣವೂ ಈ ರೀತಿಯ ಪ್ರಕ್ರಿಯೆ ಹುಟ್ಟಲು ಕಾರಣವೆನ್ನಬಹುದು.

## ಪರಂಪರೆ ಮತ್ತು ಆಧುನಿಕತೆ:

'ಆಧುನಿಕ' ಕನ್ನಡ ಕಾವ್ಯದ ಹುಟ್ಟು-ವಿಕಾಸಗಳಿಗೆ ಕಾರಣವಾದ ಒತ್ತಡ ಹಾಗೂ ಪ್ರೇರಣೆಗಳನ್ನು ಕುರಿತು ಆಲೋಚಿಸುವ ಮೊದಲು, ತತ್ಪೂರ್ವದ ಕನ್ನಡ ಕಾವ್ಯ ಪರಂಪರೆಯನ್ನು ಸಾಂದರ್ಭಿಕವಾಗಿಯಾದರೂ ನೋಡುವುದು ಅನಿವಾರ್ಯವೆನಿಸುತ್ತದೆ. ಕವಿ ಮತ್ತು ಕಾವ್ಯ ಕುರಿತ ಚರ್ಚೆಯು ನಮ್ಮ ಭಾರತೀಯ ಸಮಾಜ ಹಾಗು ಸಂಸ್ಕೃತಿಯ ಚರ್ಚೆಯೂ ಹೌದು. ಕವಿಗಳ ಬಗೆಗೆ ದಂತಕಥೆಗಳನ್ನು, ಐತಿಹ್ಯಗಳನ್ನು ಸೃಷ್ಟಿಸಿದ ನಾಡಿದು. ಒಬ್ಬ ಕವಿಯು ಕೈಯನ್ನು ಉಜ್ಜಿಕೊಂಡರೆ ಎಲ್ಲಿಯೋ ಹತ್ತಿದ ಬೆಂಕಿ ಆರಿಹೋಗುತ್ತದೆ. ಪವಿತ್ರಕಾವ್ಯವನ್ನು ಬರೆಯುವುದರ ಮೂಲಕ ಮತ್ತೊಬ್ಬ ಕವಿಗೆ ಕಳಚಿಹೋದ ಕಲ್ಲಿನ ಜಾಗದಲ್ಲಿ ಕಲ್ಲು ಮೂಡುತ್ತದೆ. ಮತ್ತೊಬ್ಬ ಕವಿ ಕೀರ್ತನೆ ಮಾಡುತ್ತ ದೇವರ ಮೂರ್ತಿಯನ್ನು ತಿರುಗಿಸಿಬಿಡುತ್ತಾನೆ. ಈ ರೀತಿಯಲ್ಲಿ ಚಿತ್ರವಿಚಿತ್ರ ಮಿಥ್‌ಗಳನ್ನು ಸೃಷ್ಟಿಸುತ್ತ ಕವಿಗಳನ್ನು

ಅಲೌಕಿಕತೆಗೆ ಏರಿಸಿದ ಈ ನಾಡಿನಲ್ಲಿ ಕವಿಗಳನ್ನು ಕಾವ್ಯ ಮುಖೇನ ಪುರಾಣಪುರುಷರನ್ನಾಗಿ ಮಾಡಲಾಗಿದೆ. ನಮ್ಮ ದೇಶೀಯ ಪರಂಪರೆಯ ನರ-ನಾಡಿಗಳಲ್ಲಿ ಈ ರೀತಿಯ ಕತೆಗಳು ಹಾಸುಹೊಕ್ಕಾಗಿ ಬೆಳೆದುಕೊಂಡಿವೆ.

''ಇದರ ಜೊತೆಗೆ ಕವಿಗಳನ್ನು ಕುರಿತಂತೆ 'ಕುರಿತೋದದೆಯುಂ ಕಾವ್ಯ ಪ್ರಯೋಗಪರಿಣತ ಮತಿಗಳ್'' ಎನ್ನುವುದರಿಂದ ಹಿಡಿದು,

೧) ಕವಿ ಋಷಿ ಸದೃಶನಾದವನು

೨) ಕವಿಯೇ ಬ್ರಹ್ಮ

೩) ಕವಿಯ ಮಾನಸಿಕ ಅವಸ್ಥೆಯೇ ಕವಿತೆಗೆ ಕಾರಣ

೪) ಕವಿಗೆ ಸಂಸ್ಕಾರ ಮುಖ್ಯ

೫) ಕವಿಯ ಹಿನ್ನೆಲೆಯಲ್ಲಿ ಜನಾಂಗವೊಂದರ ಸ್ಮೃತಿಗಳು ಇರುತ್ತವೆ.'' 1

ಎಂಬೆಲ್ಲಾ ಗ್ರಹಿಕೆಗಳು ಬಂದಿವೆ. ಒಂದು ರೀತಿಯಲ್ಲಿ ಆಗಿನ ಓದುಗ-ಕೇಳುಗವಲಯ ಹಾಗೂ ಅಂದಿನ ಸಾಮಾಜಿಕ ಸಂಸ್ಕೃತಿ,ಕವಿಯನ್ನು ಆ ರೀತಿ ನಡೆಸಿಕೊಂಡು ಬಂದಿದೆ. ಏಕೆಂದರೆ ''ಒಂದು ಕಾಲಕ್ಕೆ ಕಾವ್ಯವು ಸಾಹಿತ್ಯದ ಕೇಂದ್ರವಷ್ಟೇ ಅಲ್ಲ ಸಮಸ್ತವೂ ಆಗಿತ್ತು. ಸಾಹಿತ್ಯ ಹಾಗೂ ಕಾವ್ಯ ಈ ಎರಡೂ ಸಮಾನಾರ್ಥಕವಾಗಿದ್ದ ಕಾಲ ಅದು. ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ 'ಸಾಹಿತ್ಯ' ಎಂಬ ಮಾತಿನ ವ್ಯಾಪ್ತಿ ಹಿಂದಿಗಿಂತ ಬೇರೆಯಾದರೂ,ಸಾಹಿತ್ಯ ಚರ್ಚೆಯ ಕೇಂದ್ರ ಕಾವ್ಯವೇ ಆಗಿರುವುದು ಸ್ವಾರಸ್ಯಕರ ಸಂಗತಿಯಾಗಿದೆ. ನವೋದಯ ಹಾಗೂ ನವ್ಯ ಸಂದರ್ಭಗಳಲ್ಲಿ ಸಾಹಿತ್ಯ ಚರ್ಚೆ ಮೂಲತಃ ಕಾವ್ಯಕೇಂದ್ರವಾಗಿದ್ದರೆ,ಪ್ರಗತಿಶೀಲ ಮತ್ತು ದಲಿತ -ಬಂಡಾಯ ಸಾಹಿತ್ಯ ಚಳುವಳಿಗಳ ಸಂದರ್ಭಗಳಲ್ಲಿ ಸಾಹಿತ್ಯವನ್ನು ಕುರಿತ ಚರ್ಚೆ ಕೇವಲ ಕಾವ್ಯಕೇಂದ್ರವಾಗದೆ ಒಟ್ಟಾರೆಯಾಗಿ ಸಾಹಿತ್ಯವನ್ನು ಅದಕ್ಕೆ [illegible] ಸಾಮಾಜಿಕ ಧೋರಣೆಗಳನ್ನು ತನ್ನ ತೆಕ್ಕೆಗೆ ತೆಗೆದುಕೊಂಡದ್ದು ಒಂದು ಮುಖ್ಯವಾದ ಬದಲಾವಣೆಯಾಗಿದೆ'' 2. ಆರಂಭದಿಂದಲೂ ಕವಿ ತನ್ನ ಅಂತಃಶಕ್ತಿಯ ಜೊತೆಗೇ ತನ್ನ ಹಿನ್ನೆಲೆಯ ಸಾಮುದಾಯಿಕ ಕಾಳಜಿಯನ್ನು ವಿಸ್ತರಿಸಿಕೊಳ್ಳುತ್ತ, ಪರಂಪರಾಗತ ವಸ್ತು ಪರಂಪರೆಯನ್ನು ಮುಂದುವರೆಸುತ್ತ, ತಾನು ತೆಗೆದುಕೊಂಡ ಮೂಲಕೃತಿಯನ್ನು ಬೇರೊಂದಾಗಿ ಮಾರ್ಪಡಿಸಲು ಹೆಣಗಿದ್ದಾನೆ.

ಅಂತಲೇ ಆತನ ಅನಿಸಿಕೆಗಳು ಆಯಾ ಮಾಧ್ಯಮದ ವಿಷ್ಯತೆಗಳನ್ನು ದಾಟುತ್ತವೆ. ಕಾವ್ಯ ಕೇವಲ ಧಾರ್ಮಿಕ, ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಅಭಿವ್ಯಕ್ತಿಗಳ ಮಾತ್ರ ಅಲ್ಲ. ವಚನಕಾರರು ಕಂಡಂತೆ ವಿಷಯದ ಬಿಟ್ಟು ನಿರ್ವಿಷಯ-ವಾಗುವುದು ಕೂಡ ಕಾವ್ಯ.

ಕವಿತೆಯಲ್ಲಿ 'ಆಧುನಿಕತೆ'ಯನ್ನು - ಕುರಿತ ಚರ್ಚೆ

ಯುಗ ಯುಗದ ಅಭ್ಯುದಯ ಸ್ಥಿತಿ ಹಾಗೆ ನಿತ್ಯಗನ್ಯವಂತರಲ್ಲ. ಆಯಾ ಕಾಲದ ಮನೋಧರ್ಮಕ್ಕನುಗುಣವಾಗಿ ಅದು ಹಿಗ್ಗುತ್ತ ಕುಗ್ಗುತ್ತ ತನ್ನ ಗತಿಯನ್ನು ಬೆಳೆಸುತ್ತಿರುತ್ತದೆ. ಹೀಗೆ ನಮ್ಮ ಕನ್ನಡ ಕಾವ್ಯವು ಕೂಡ ರಾಜಾಶ್ರಯಗಳ ಏರುಪೇರುಗಳಿಂದ, ಮತ ಧರ್ಮಗಳಿಂದ, ಭಕ್ತಿ, ಅನುಭಾವಗಳ ಪ್ರವೃತ್ತಿಗಳಿಂದ ತನ್ನ ತಾನು ಕಂಡುಕೊಳ್ಳುತ್ತ ಬಂದಿರುವುದನ್ನು ನಾವು ಗುರ್ತಿಸಬಹುದು.

ಆಧುನಿಕ ಕಾವ್ಯ ಚರ್ಚೆಗೆ ಬಂದಾಗ ೧೯ನೇ ಶತಮಾನದ ಮಂಗಳೂರು, ಧಾರವಾಡ, ಮೈಸೂರು, ಹೈದರಾಬಾದ ಕರ್ನಾಟಕ ಈ ಪ್ರದೇಶಗಳ ಪ್ರಾದೇಶಿಕ ವೈಶಿಷ್ಟ್ಯಗಳು ಮುಖ್ಯವಾಗುತ್ತವೆ. ಇಲ್ಲಿಯ ಪರಿಸರದ ಕವಿಗಳಿಗೆ ಸಂಸ್ಕೃತದ ಹೇರಿಕೆಯಿಂದ ಬಿಡಿಸಿಕೊಳ್ಳುವುದು ಒಂದು ಬಗೆಯಾದರೆ, ತಮ್ಮ ಮೇಲೆ ಪ್ರಭಾವ ಬೀರುತಲಿದ್ದ ಸುತ್ತಲ ಭಾಷೆಗಳಿಂದಲೂ ಕಾಪಾಡಿಕೊಳ್ಳುವ ಸ್ಥಿತಿಯು ಇನ್ನೊಂದು ಅಗತ್ಯವಾಗಿತ್ತು. ಎಂತಲೇ ಆಗ ಸಾಹಿತ್ಯೇತರವಾದ ಅನೇಕ ಚಳುವಳಿಗಳಿಗೆ ಸ್ಫೂರ್ತಿ ತುಂಬುವ ಕೆಲಸ ಕವಿಗಳಿಗೆ ಅನಿವಾರ್ಯವಾಗಿತ್ತು.

ಉತ್ತರ ಕರ್ನಾಟಕ ದಲ್ಲಿಯಂತೂ ಮರಾಠಿಯ ಪ್ರಾಬಲ್ಯದಿಂದ ಕನ್ನಡಕ್ಕೆ ಸಹಜವಾಗಿ ಸಿಗಬೇಕಾಗಿದ್ದ ಸ್ಥಾನವು ಸಿಕ್ಕಿರಲಿಲ್ಲ. ಕನ್ನಡದ ಜನರನ್ನು ಆಲಸ್ಯದಿಂದ ಕೆರಳಿಸಿ, ಎಚ್ಚರಿಸಿ ಕಾರ್ಯೋನ್ಮುಖರನ್ನಾಗಿ ಮಾಡುವುದು ಕನ್ನಡತನವನ್ನು ಅವರಲ್ಲಿ ಪ್ರಚೋದಿಸುವುದು ಮೊದಲ ಆವಶ್ಯಕತೆಯಾಗಿತ್ತು.

ಶಾಂತಕವಿಗಳು ೧೮೮೦ರ ಸುಮಾರಿನಲ್ಲಿದ್ದ ಸ್ಥಿತಿಯನ್ನು ತಮ್ಮ ಕವಿತೆಯಲ್ಲಿ ಹೀಗೆ ವರ್ಣಿಸಿದ್ದಾರೆ:

ಎಲ್ಲಿ ನೋಡಲು ಕನ್ನಡದ ಭಾಷೆಯುಬ್ಬದ
ರಲಿಲ್ಲ, ಮೃದುಶಬ್ದವಿಲ್ಲ, ಭಾಷಾಸರಣಿ,
ಯಿಲ್ಲವೈ, ವ್ಯಾಕರಣವಿಲ್ಲ, ನಾಟಕವಿಲ್ಲ, ನುಡಿಗಳೆಲ್ಲವಿನ್ನು
ಇಲ್ಲವು, ಮುಂದಾಗುವಾಸೆ ಕೂಡ ಇಲ್ಲ

ಆಗಿನ ಶೈಲಿಯೋ ಎಲ್ಲೋ ಸಂಸ್ಕೃತದಲ್ಲಿ ಬರೆಯುವುದಕ್ಕೆ ಹೋಗಿ ಮರೆತು ಕನ್ನಡ ಪ್ರತ್ಯಯಗಳನ್ನು ಜೋಡಿಸಿದಂತಿತ್ತು. ಸರಳ ಮತ್ತು ಸ್ಫುಟವಾಗಿರುವ ಕನ್ನಡ ಮಾತುಗಳನ್ನು ಮೂಲೆಗೆ ತಳ್ಳಿ ಸಂಸ್ಕೃತ ಕರ್ಮಣಿ ಪ್ರಯೋಗಗಳನ್ನು ಮಾಡಿ, ಜನರಿಂದ ಸಾಹಿತ್ಯವನ್ನು ದೂರಾಗುವಂತೆ ಮಾಡಿದ್ದರು. ಶ್ರೀ ಅವರು ಹೇಳುವಂತೆ ''ಇಂಗ್ಲೀಷ್ ಬಲ್ಲವರು ಎಳ್ಳಷ್ಟಾದರೂ ಹರ್ಷವಿಲ್ಲ, ಲಾಭವಿಲ್ಲ, ಎಲ್ಲ ಕಷ್ಟವೂ, ಅಸಂಬದ್ಧ ಎಂದು ಕೈಬಿಟ್ಟು ಬಿಟ್ಟರು. ಸಂಸ್ಕೃತ ವಿದ್ವಾಂಸರಂತೂ ಕನ್ನಡದಲ್ಲೇನಿದೆ ವ್ಯಾಕರಣ, ಸಂಸ್ಕೃತದ ಎಂಜಲು, ಉಗಿದ ಕಬ್ಬಿನ ಪಿಪ್ಪೆ ಎಂದು ಧಿಕ್ಕರಿಸುತ್ತಾರೆ''[2] ಎಂಬಮಾತುಗಳು ಆ ಹೊತ್ತಿನಲ್ಲಿ ಸತ್ಯವಾಗಿದ್ದವು.

ಆಗಿನ ಅನುವಾದ ಮತ್ತು ಸ್ವತಂತ್ರ ಕವಿತೆಗಳೆಲ್ಲಾ ಪಾರಂಪರಿಕ ಛಂದಸ್ಸುಗಳಲ್ಲಿದ್ದವು. ಅಲ್ಲಿ ಭಾಷೆಯ ಹೊಸತನವೇನೋ ಕಾಣುತ್ತದೆ. ಆದರೆ ಅವುಗಳ ಹಳೆಯ ರೀತಿ ಮತ್ತು ಏಕತಾನತೆಗಳು ಕವಿತೆಯ ಕೊರಳಮುಕಿದಂತೆ ಕಾಣುತ್ತವೆ. ಈ ಕವಿತೆಗಳಿಂದ ಇಷ್ಟಂತೂ ಖಚಿತವಾಗುತ್ತದೆ. ಹೊಸಭಾವ, ಹೊಸವಸ್ತು, ಹೊಸಭಾಷೆ, ಇವುಗಳು ಕಂಡರೂ ಹೊಸ ಛಂದೋರೂಪಗಳ ಸೃಷ್ಟಿ ಮಾತ್ರ ಆಗಲಿಲ್ಲ. ಆದಿಪ್ರಾಸದ ವಿಷಯಕ್ಕಂತೂ ಸಂಪ್ರದಾಯ ಮೀರಿ ನಡೆಯುವುದು ಅವರ್ಯಾರಿಗೂ ಸಾಧ್ಯವಿರಲಿಲ್ಲ. ಆ ಕಾಲದ ಕವಿತೆಗಳಲ್ಲಿ ರಸಭಾವಗಳಿಗಿಂತ ಬಾಹ್ಯಾಡಂಬರಗಳು ಅಂದರೆ ಶಬ್ದಾಲಂಕಾರಗಳು ಹೆಚ್ಚಾಗಿರುತ್ತಿದ್ದವು. ''ಅಷ್ಟೇ ಅಲ್ಲ, ಅಂದಿನ ಕನ್ನಡ ಬರಹ ಮರಾಠಿ ಹಾಳೆ, ಬೋಳೆ, ಗೋರೆಗಳೇ'' ಇದ್ದರು. ಉದಾ: ''ಧರ್ಮ ನಿನಗ್ಯಾಕೆಹೊ ಮಧ್ಯೆಹ ಮರ್ಮ, ಒಳ್ಳೆಯದಲ್ಲೋ ನಿನಕರ್ಮ, ಹ್ಯಾಗೆ ಬರಲಿಲ್ಲೋ ನಿನಗೆ ಶರ್ಮ'' (ಇದು ಹಿಂದಿಕರಮಶಿ = ನಾಟಕ ಎಂಬ ಹರದ ರೂಪಾಂತರ) ಎಂಬುದರಲ್ಲಿ ಪ್ರಾಸಾನುಪ್ರಾಸ

ಜೋಡಣೆ ಮುಖ್ಯವಾಗಿತ್ತು.[3] ಹಾಗೆಯೇ

ಚಿಗಪ್ಪ ನಿನ್ನೆತ್ತು ಚಿಗುಪುಲ್ಲ ಮೇಯಲಿ
ಅಣ್ಣಾ ನಿನ್ನೆತ್ತು ಬಣ್ಣಾ ಮೇಯಲಿ
ಅಕ್ಕಾ ನಿನ್ನೆತ್ತು ರೊಕ್ಕಾ ಮೇಯಲಿ
ತಂಗೀ ನಿನ್ನೆತ್ತು ಭಂಗೀ ಮೇಯಲಿ

ಇಲ್ಲಿ ಅರ್ಥಕ್ಕಿಂತ ಪ್ರಾಸ ಮುಖ್ಯವಾಗಿದೆ. ಇಲ್ಲಿ ತತ್ಕಾಲಕ್ಕೆ ಕವಿತೆ ಕೊನೆಯಾದಂತೆ ಕಂಡರೂ ಇದನ್ನು ಹೀಗೇ ಬೆಳೆಸುತ್ತ ಹೋಗಲೂಬಹುದು. ಇಂತಹ ಹುಂಬ ರಚನೆಗಳಿಂದ, ಕನ್ನಡ ಕವಿತೆಗಳನ್ನು ಪ್ರಾಸದ ಉರುಳಿನಲ್ಲಿಟ್ಟಂತಾಗಿದೆ ಎಂದು ಅನೇಕರು ಪರಿಭಾವಿಸಿದರೂ ಅದನ್ನು ತೊರೆದು ರಚಿಸುವ ಯೋಚನೆಯನ್ನು ಮಾಡಲಿಲ್ಲ; ಪ್ರಾಸ ಪರಂಪರೆಯನ್ನು ಎದುರಿಸುವಷ್ಟು ದಿಟ್ಟತನವನ್ನು ತೋರಲಿಲ್ಲ. ಹೀಗೆ ಜಡಗಟ್ಟಿದ ವಾತಾವರಣದಿಂದ ಕನ್ನಡ ಕವಿತೆಯು ವಸ್ತು ಆಯ್ಕೆಯಿಂದಾಗಲೀ ನಿರೂಪಣಾ ಶೈಲಿಯಿಂದಾಗಲೀ ಆಕರ್ಷಣೆಯನ್ನು ಬೆಳೆಸದಿದ್ದುದರಿಂದ ಕಾವ್ಯಕ್ಕಿದ್ದ ಮಾನ್ಯತೆ ಸರಿಯುತ್ತ ಗದ್ಯ ಮತ್ತು ನಾಟಕಗಳು ಕ್ರಮೇಣ ಆ ಸ್ಥಾನವನ್ನು ತುಂಬ ತೊಡಗಿದವು. ಅನಿಸುತ್ತದೆ.

ಬಹು ಹಿಂದೆಯೇ 'ಆಧುನಿಕ' ಕವಿತೆಯ ಬಗ್ಗೆ ಚರ್ಚಿಸುತ್ತಿದ್ದರೆನ್ನುವುದಕ್ಕೆ ಸಾಕ್ಷಿ, ಎಸ್. ಅನಂತನಾರಾಯಣ ಅವರು ಡಿ.ವಿ.ಜಿ. ಮತ್ತು ಎಸ್.ಜಿ.ನ. ಅವರ ಎರಡು ಮಾತನ್ನು ದಾಖಲಿಸಿ 'ಆಧುನಿಕ' ಅಂದರೆ 'ಈಚೀಚಿನ' ಎಂದು ಅರ್ಥೈಸಿರುವುದು.[3] 'ಆಧುನಿಕ' ವಾದವನ್ನು ಕುರಿತು ನಾವು ಮಾತನಾಡುವಾಗ ಅದರ ಅರ್ಥವೇನೆಂಬುದನ್ನು ಸ್ಪಷ್ಟಮಾಡಿಕೊಂಡಿರಬೇಕು. ವಿಶೇಷಾರ್ಥದಲ್ಲಿ 'ಆಧುನಿಕ'ವಾದವು ಗತಕಾಲದ ಜೊತೆಗೆ ವೈರವನ್ನಾಗಲಿ ಅದರಿಂದ ಸಂಪೂರ್ಣ ಸಂಬಂಧ ಕಡಿದುಕೊಳ್ಳುವುದನ್ನಾಗಲಿ ಸೂಚಿಸಬಾರದು. ಯಾಕೆಂದರೆ ಕಾಲ ಹಾಗೂ ಜೀವನಗಳು ಎಂದೂ ನೀರುಹೋಗದ ಪೆಟ್ಟಿಗೆಗಳಂತೆ ಭದ್ರವಾದ ವಸ್ತುಗಳಲ್ಲ. 'ಆಧುನಿಕ'ವಾದವು ಹಿಂದಿನ ಯಾವುದೇ ಸೃಜನಶೀಲ ಕಾಲಖಂಡಕ್ಕಿಂತ ಉತ್ತಮವಾದುದೆಂದು ಇದರ ಅರ್ಥವಲ್ಲ. 'ಆಧುನಿಕ'ವಾಗುವುದೆಂದರೆ ಪ್ರಸ್ತುತ ಕ್ಷಣದಲ್ಲಿ ಸಂಪೂರ್ಣವಾಗಿ ಜೀವಂತವಿರುವುದು. ಅನುಭವದ ಎಲ್ಲ ಸ್ತರಗಳಲ್ಲೂ ಸೃಜನಶೀಲ ರೀತಿಯಲ್ಲಿ ಸಂವೇದನಾ ಶಕ್ತಿಯನ್ನು ಉಳಿಸಿಕೊಳ್ಳುವುದು. ಮಾನವ ಜಗತ್ತಿನಲ್ಲಿ ಸದ್ಯ ಸಂಭವಿಸುತ್ತಿರುವ

ಬೆಳವಣಿಗೆ-ಬದಲಾವಣೆಗಳಲ್ಲಿ ಸಹಜವಾಗಿ ಭಾಗವಹಿಸುವುದು.

## ಆಧುನಿಕ ಕವಿತೆಯ ವಿವಿಧ ನೆಲೆಗಳು

'ಆಧುನಿಕ' ಕನ್ನಡ ಕಾವ್ಯದ ಆರಂಭಿಕ ಹಂತಗಳನ್ನು ಸ್ಥೂಲವಾಗಿ ಹೀಗೆ ಗುರುತಿಸಬಹುದು.

೧) ಇಂಗ್ಲೀಷ್ ಪ್ರೇರಣೆಯಿಂದ ಕನ್ನಡ ಕಾವ್ಯ ಕಂಡ ಬದಲಾವಣೆ.

೨) ಲಾವಣಿಗಳು, ಸವಾಲ್-ಜವಾಬ್, ಹರದೇಶಿ-ನಾಗೇಶಿ ಮುಂತಾದ ಕಾವ್ಯ ಪ್ರಕಾರಗಳಲ್ಲಿ ಹುಟ್ಟಿಕೊಂಡ ಹೊಸತನ.

೩) ಹೊಂದಿಕೆ ಸಾಧ್ಯವಾಯ 'ಆಧುನಿಕ' ಕಾವ್ಯದಲ್ಲಿ ಮುಂದುವರೆದ ಬಗೆ, ತತ್ವಪದಕಾರರು ಕನ್ನಡ ಕಾವ್ಯಕ್ಕೆ ಕೊಟ್ಟ ಹೊಸತನ.

೪) ಕ್ರೈಸ್ತ ಹಾಡುಗಳ ವಿಶೇಷತೆ.

೫) ಹಾಡುಗಾರಿಕೆಯಿಂದ ಸರಿದು ಬರಹ ಮಾಧ್ಯಮಕ್ಕೆ ಬಂದ ಕಾವ್ಯ ಎದುರಿಸಿದ ಸಂಕ್ರಮಣ ಸ್ಥಿತಿಗಳು.

ಉಲ್ಲೇಖಗಳು.

1. ತೀ.ನಂ. ಶ್ರೀಕಂಠಯ್ಯ: ಭಾರತೀಯ ಕಾವ್ಯ ಮೀಮಾಂಸೆ. ಪು.47

2. ಕೇಶವ ಶರ್ಮ ಕೆ. : ನವೋದಯ ವಿಮರ್ಶೆ. ಪುಟ 1

3. ಅನಂತ ನಾರಾಯಣ ಎಸ್. : ಹೊಸ ಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಗೀತೆಗಳ ಪ್ರಭಾವ. ಪುಟ 20

## ಅಧ್ಯಾಯ - ೨

### ಕಂಡ ಕಂಡವರೆಲ್ಲ ಹಾಡಕಲ್ತಾರಪ್ಪ..........

ಕಾವ್ಯ ಕಟ್ಟುವ ಕೆಲಸ ಎಷ್ಟು ಪ್ರಮುಖವೋ ನಮ್ಮ ಪರಂಪರೆಯಲ್ಲಿ ಹಾಡುವಿಕೆ ಅಷ್ಟೇ ಪ್ರಮುಖವಾದದ್ದು. ಕುಮಾರವ್ಯಾಸನು ಹಾಡಿದನೆಂದರೆ . . . ಎನ್ನುವಲ್ಲಿ ಆ ಅರ್ಥ ಇದೆ. ಮುದ್ರಣ ಯಂತ್ರಗಳು ಬರುವ ಮುನ್ನ ಈ ರೀತಿ ಹಾಡುವಿಕೆ ಕವಿಯು ಸಮುದಾಯಕ್ಕೆ ಆತ್ಮೀಯವಾಗಿ ನಿವೇದಿಸಿಕೊಳ್ಳುವ ಮುಖ್ಯ ಮಾದರಿ ಆಗಿತ್ತು. ಬಸವಣ್ಣ 'ಆನು ಒಲಿದಂತೆ ಹಾಡುವೆ ' ಎನ್ನುವುದು ಕೇವಲ ಖಾಸಗಿತನ ಮಾತ್ರವಲ್ಲ. ಅದು ಕೂಡಲ ಸಂಗನಿಗೆ ಹಾಗೂ ಸಮುದಾಯಕ್ಕೆ ತಾನು ನಿವೇದಿಸಿಕೊಳ್ಳಬಯಸಿದ ಮಾದರಿ ಕೂಡ. ಹೀಗೆ ಹಾಡುವ ಮತ್ತು ನಿವೇದಿಸಿಕೊಳ್ಳುವ ಕ್ರಮ ಹಿಂದಿನ ಸಹಜ ರೂಢಿಯಾಗಿತ್ತು. ಅದರಲ್ಲೂ ತೋಂಡಿ ಸಂಪ್ರದಾಯದೊಳಗೆ ಈ ಬಗೆಯ ಹಾಡುವಿಕೆಯೇ ಪ್ರಧಾನ. ಜನಪದರಲ್ಲಿ ಹಾಡುವ ಮತ್ತು ರಚಿಸುವ ಕವಿ ಬೇರೆ ಬೇರೆ ಅಲ್ಲ. ಈ ಬಗೆಯ ಹಾಡುವಿಕೆ ಮತ್ತು ಕಟ್ಟುವಿಕೆಗಳು ಮತ್ತಷ್ಟು ಬೇರೆ ಬೇರೆಯಾದದ್ದು. 'ಆಧುನಿಕತೆ ' ಕಾಲಿಟ್ಟ ಮೇಲೆ. ಮುದ್ರಣ ವ್ಯವಸ್ಥೆ ಬಂದಮೇಲೆ. 'ಆಧುನಿಕ' ಕವಿ ''ಎಲ್ಲ ಕೇಳಲಿ ಎಂದು ನಾನು ಹಾಡುವುದಿಲ್ಲ '' ಎನ್ನುವಾಗ, ಈ ಕವಿ ತೋಂಡಿ ಸಂಪ್ರದಾಯದವನಲ್ಲ ಎಂಬುದೇ ವ್ಯಂಗ್ಯ. ಹೀಗೆ ಹೇಳುವಾಗ ಆತನಿಗೆ ಸಮೂಹ ಬಿಡುವ ಹಠವಿಲ್ಲ. ಆತ ಅದನ್ನು ಬರೆದು ಅಚ್ಚು ಹಾಕಿಸುತ್ತಿದ್ದಾನೆ. ಆದರೆ ತೋಂಡಿ ಕವಿ

'ಎಲ್ಲಿ ಕೇಳಿರಿ' ಎಂದೇಹಾಡುತ್ತಾನೆ. ಏಕೆಂದರೆ ಕೇಳುವವರು ತನ್ನ ಹಾಡನ್ನ ಕೇಳಲಿಕ್ಕಾಗಿ ಪರಿಪರಿಯಾಗಿ ಮನ ಒಲಿಸುವ ಬಗೆಯನ್ನ ಎಲ್ಲ ಲಾವಣಿಗಳ ಆರಂಭದಲ್ಲಿ ನೋಡುತ್ತೇವೆ.

ವಸಾಹತೀಕರಣ ದಿಂದ ಬಂದ 'ಆಧುನಿಕ' ಬಾಳಿನಿಂದ ಹಾಡುವ ಮತ್ತು ಕಟ್ಟುವ ಸಂಪ್ರದಾಯವು ಬರಹ ಸಂಪ್ರದಾಯಕ್ಕೆ ಆದ್ಯತೆ ನೀಡುತ್ತ ಹೋಯಿತು. ಅಕ್ಷರ/ವೃ ಒಂದು/ರಾಜಕೀಯ ಶಕ್ತಿಯಾದ ಕಾಲವಿದು. ಹಾಗಾಗಿ ಕವಿತೆ ಸಾಮುದಾಯಿಕ ಪ್ರಧಾನತೆಯನ್ನ ಕಳೆದುಕೊಳ್ಳುತ್ತ 'ವೈಯಕ್ತಿಕ' ರಚನೆಯಾಗಿ ಮಾರ್ಪಟ್ಟಿತು. ಸಂಬಂಧ ಮತ್ತು ಸಹಬಾಳ್ವೆಯನ್ನು ಬೆಳೆಸುವ ಬದುಕಿನ ರೀತಿಯಲ್ಲೇ ಹಿಂದಿನ ಕಾವ್ಯವೂ ಇತ್ತು. ಆಧುನಿಕತೆ ಕಾಲಿಟ್ಟ ಮೇಲೆ ಉಂಟಾದ ನಗರೀಕರಣ, ಹೊಸ ಆರ್ಥಿಕ ರಚನೆಗಳು, ವ್ಯಕ್ತಿಗಳನ್ನು ಅವಿಭಕ್ತ ಕುಟುಂಬದಿಂದ ಬೇರ್ಪಡಿಸಿ ಅವರವರ ಹೆಂಡತಿ ಮಗುವಿಗೆ ಮಾತ್ರ ಸೀಮಿತವಾಗಿಸುವತ್ತ ದೂಡಿತು. ಹೊಸ ಬಗೆಯ ಶಿಕ್ಷಣದಿಂದ ಬಂದ ಹೊಸ ಆರ್ಥಿಕ ರಚನೆಗಳು, ವ್ಯಕ್ತಿಗಳ ಖಾಸಗೀತನವನ್ನೇ ಒಂದು ಮೌಲ್ಯವಾಗಿಸಿದವು. ಇದನ್ನೇ 'ಆಧುನಿಕ' ಕಾವ್ಯ ಒಬ್ಬ ವ್ಯಕ್ತಿಯು ರಚನೆ ಮಾಡುವ, ಓದುವ, ಏಕಾಂತವಾಗಿ ಗ್ರಹಿಸುವ ಮಾಧ್ಯಮವಾಗಿಸಿಬಿಟ್ಟಿತು.

ವಸಾಹತೀಕರಣದ ಪ್ರಭಾವ ದೇಸೀಯ ಮತ್ತು ವಿದೇಶಿಯ ಎರಡೂ ರೂಪಗಳಲ್ಲೂ ಘಟಿಸಿದ್ದು ಅಕ್ಷರ ಕಾವ್ಯದೊಳಗೆ. ಮೌಖಿಕ ಕಾವ್ಯದಲ್ಲಿ ಈ ಬಗೆ ಇಲ್ಲ. ಉದಾಹರಣೆ:

''ಬಂಗ್ಲೆದೊಳಗ ಸಾಬಿಂದಾಯ ಕೇಳಿದರ ಕಲ್ತವರು ಹೋಗತಾರ ಓಡೋಡಿ ಇಂಗ್ಲೀಷ್ ಮಾತಿನ ಟಿಸಪ್ಪನೆ ಮಾತನಾಡಿ ಉಪಕಾರ ಮಾಡತಾರ ಲಗುಮಾಡಿ'' 1

ಇಲ್ಲಿನ ಬಂಗ್ಲೆ, ಇಂಗ್ಲೀಷ್ ಸಾಹೇಬ ಮತ್ತು ಅವನ ಭಾಷೆ ಮೂರೂ ಹೇಗೆ ಹೊರರೂಪಿಯಾಗಿ ಆಕರ್ಷಿಸಬಲ್ಲ ದೆಂಬುದಕ್ಕೆ ಈ ಎರಡು ಸಾಲುಗಳೇ ಸಾಕು. ಇಲ್ಲಿನ ಈ ರೀತಿ ವ್ಯಂಗ್ಯವೂ [illegible]ದು.

ಇನ್ನು ಒಳರೂಪಿಯಾಗಿ ಶಕ್ತರಾಜಕೀಯ ವ್ಯವಸ್ಥೆ ಹಲವು ದೇಶೀಯ ಸಂಸ್ಕೃತಿಗಳನ್ನು ಆರ್ಥಿಕ ಶಕ್ತಿಗಳ ಮೂಲಕ ಅಧೀನಗೊಳಿಸಿ ಕೊಳ್ಳುತ್ತದೆ. ಉದಾಹರಣೆ:

''ಕಂಡ ತಮ್ಮನ ಕುಲ ಕಡಿಮೆ ಅಂತ ನಮ್ಮವರಿಗೆ ಹುಡಿಯುವರು
ತಂದಿ ತಮ್ಮನ ಇಂಗ್ಲೀಷರವರಿಗೆ ಒಳಗ ಕುರ್ಚಿ ಹಾಕಿ ಕೂಡ್ರಿಸುವರು''2

ಲಾವಣಿ ಎಂದರೆ ಸುಂದರವಾದುದು, ಗೀತವಾದುದು ಎಂಬ ಮಾತುಗಳನ್ನು ವಿದ್ವಾಂಸರು ಹೇಳಿದರೂ, ಭೌತಿಕ ಭೀಕರ ಆಘಾತಗಳನ್ನು ಲಾವಣಿಯೂ ತನ್ನ ಎದೆಯಲ್ಲಿ ತುಂಬಿಕೊಂಡಿದೆ. ಇಲ್ಲಿನ ವಿಶೇಷವೆಂದರೆ, ತತ್ವಪದ ಕಾರರಂತೆ ಇವು ತತ್ವ-ನೀತಿ-ಧರ್ಮ ಸಂಬಂಧಿಯಾಗಷ್ಟೇ ತಮ್ಮ ಅನಿಸಿಕೆಗಳನ್ನು ಕೇಂದ್ರೀಕರಿಸಿ ಕೊಳ್ಳದೆ, ಇಡೀ ಸಮೂಹದ ಜೊತೆ ಬೆರೆಯಲು ಹೆಣಗುತ್ತವೆ. ಅವುಗಳೊಳಗಿನ ಶೃಂಗಾರ, ವೀರ, ಐತಿಹಾಸಿಕ ದಾಖಲೆಗಳ ಕಡೆಗೂ ಗಮನ ಹರಿಸಿದೆ.

ಸಮುದಾಯವಾಗುವಲ್ಲಿ ದಾಸರು ತತ್ವಪದಕಾರರು ನಾದವನ್ನು ಹಿಡಿದರೆ ಇವರು ತಾಳವನ್ನು ಜೊತೆಗೆ ನೃತ್ಯವನ್ನು ಹಿಡಿದಿದ್ದಾರೆ. ಹಾಗಾಗಿ ಇಡೀ ಕಾವ್ಯ ಪರಂಪರೆಯಲ್ಲಿ ವಚನದ ಹುಟ್ಟಾಗಿ ಸಂಭವಿಸುತ್ತಿದ್ದ, ನಾದದ ಗುಂಗಿನಲ್ಲಿ ತೇಲುತ್ತಿದ್ದ ಬಗೆಯೇ ಇಲ್ಲಿ ಮುಂದುವರಿದು ಗತ್ತಿನ ಹೆಜ್ಜೆಯವರೆಗೂ ಬಂದಿದೆ. ಇದು ಒಂದು ರೀತಿಯಲ್ಲಿ ಸಾಹಿತ್ಯ, ಸಂಗೀತ ಮತ್ತು ನೃತ್ಯಗಳನ್ನು ಒಂದೆಡೆಗೆ ತರುವ ಮೂಲಕ ಎಲ್ಲಾ ಪ್ರೇಕ್ಷಕರನ್ನು, ಆಸಕ್ತರನ್ನು ಕೂಡಿಹಾಕುವ ಸಾಧ್ಯತೆಯೂ ಇರಬೇಕು.

ಆಧುನಿಕತೆಯ ಹಿನ್ನೆಲೆಯಲ್ಲಿ ಇಲ್ಲಿನ ಕ್ರಿಯೆನಿಂತ ನೀರಾಗಿಲ್ಲ. ಎಳೆಮುರಿದು ಬೆಳೆ ಬಾಡಿಲ್ಲ, ಭಿನ್ನಭಿನ್ನ ಪ್ರಾದೇಶಿಕ ವೈವಿಧ್ಯತೆಗಳ ನೃತ್ಯ, ಗೀತ, ಕಥಾರೂಪಗಳಿಗೆ(ಮೊಹರಂ ಹಾಡುಗಳು, ಹರದೇಶಿ-ನಾಗೇಶಿ, ಗೀಗೀಪದ, ಚೌಡಿಕೆ ಪದ) ಇತ್ಯಾದಿ ಆಕೃತಿಗಳು ಸೇರಿಕೊಂಡಿವೆ. ಈ ನಿಟ್ಟಿನಲ್ಲಿ ನೋಡಿದಾಗ ವಚನ, ಕೀರ್ತನೆಗಳ ಆಕೃತಿಗಳಲ್ಲಿ ಭಾಷಿಕ ಹೊಸತನಗಳು ಕಾಣಿಸಿಕೊಂಡರೆ, ತತ್ವಪದ ಮತ್ತು ಲಾವಣಿಗಳಲ್ಲಿ ಭಾಷೆಯ ಜೊತೆಗೆ ಒಳಗಿನ ಹಲ ಸಂಸ್ಕೃತಿಗಳ ಬೆಸುಗೆ ನಡೆದಿದೆ.

ಲಾವಣಿಯ ಆಕೃತಿಯನ್ನು ಕುರಿತಂತೆ "ಭಾಷೆಗೆ ವಸ್ತುವಿಗೆ ಅಭಿವ್ಯಕ್ತಿಗೆ ಜೋರು ನೀಡುವ ಸಲುವಾಗಿ ಅನ್ಯಭಾಷಾ ಬಳಕೆ ಅಗತ್ಯವಾದುದು"2 ಎಂದು ಪ್ರತಿಕ್ರಿಯಿಸುವ ತಮ್ಮಣ್ಣ ವಾಲೀಕಾರರ ಹೇಳಿಕೆ ಅಷ್ಟು ಸರಳವಲ್ಲ. ಇದಕ್ಕೆ ಇಡೀ ಸಂಸ್ಕೃತಿಯ ಹಿಂದಿನ ಅನೇಕ ಆಸ್ತಿಕ ಒತ್ತಡಗಳಿರುತ್ತವೆ. ಕೇವಲ ರೂಪ, ಆಶಯಗಳನ್ನು ಮೇಲು ಕೆಳಗೆ ಮಾಡುವ ದೃಷ್ಟಿಕೋನವು, ಈರೀತಿ ವಸ್ತು-ಭಾಷೆಯನ್ನು ಅಳೆಯುವ ದುಶ್ಚಟವನ್ನು ಬೆಳೆಸಿಕೊಂಡು ಬಿಡುತ್ತದೆ. ಹಾಗಾಗಿ

ಅಕ್ಷರಗಳ ಅಥವಾ ನುಡಿಗಳ ಕಟ್ಟಡವಾದ ಈ ಬಗೆಯ ಭಾಷೆಯ ಲೇವಲ್‌ನಲ್ಲೂ ಯಾಕೆ ಪಂಪ, ಬಸವ, ಹರಿಹರ ಮೊದಲಾದವರು ಬೇರೆ ಬೇರೆ ಪರಂಪರೆಯಲ್ಲಿ ಭಿನ್ನವಾಗಿದ್ದಾರೆ? ಯಾವ ಬಗೆಯ ಓದುಗರಿಗೆ ಬರೆದಿದ್ದಾರೆ. ಯಾಕೆ ಅಡಿಗರಿಗೆ, ಸಿದ್ಧಲಿಂಗಯ್ಯನವರಿಗೆ, ಆಯಾ ರೂಪಗಳೇ ಅನಿವಾರ್ಯವಾದವು? ಎಂದು ಕೇಳಿಕೊಳ್ಳ ಬೇಕಾಗಿದೆ. ಈ ಅರ್ಥದಲ್ಲೇ ಪರಂಪರೆಯಲ್ಲಿ ಚಲನಶೀಲತೆಯಾಗಲೀ ಮತ್ತು ಹೊಸದಾಗಿ ಕಟ್ಟುವ ಕೆಲಸವಾಗಲೀ ಕೇವಲ ಸಾಹಿತ್ಯಕ ಪ್ರಶ್ನೆಗಳು ಮಾತ್ರವಾಗಿರುವುದಿಲ್ಲ.

ಉದಾಹರಣೆಗೆ: ''ರೈಲು ಗಾಡಿ'' ಆಧುನಿಕತೆಯ ಸಂಕೇತವಾಗಿ ನಗರೀಕರಣದ ಕ್ರೌರ್ಯವಾಗಿ, ಹಳ್ಳಿಗೆ ಬರುವಾಗ ಅದು ''ಪರಂಗೇರು ಮಾಡಿದ ಕೌತುಕ'' ವಾಗುತ್ತ ಪದ್ಯ ಶುರುವಾಗುತ್ತದೆ. ಇದರಾಚೆಗೆ ''ದಿಕ್ಕು ದೆಸ್ಯಾಯಿಲ್ಲ ಮಾಡ್ಯಾರೋ ಸಿಡಕಾ'' ಎಂದು ಅದರ ಆಗಮನದ ವಿರುದ್ಧ ಸಿಟ್ಟು ಸಿಡುಪುಗಳನ್ನು ಕಟ್ಟಿ ಕೊಡುತ್ತದೆ. ಯಾಕೆ ಈ ಪದ್ಯ ಈ ಎರಡೂ ಭಾವವನ್ನು ಹಿಡಿದಿದೆ. ಎನ್ನುವುದಕ್ಕೆ ಕೇವಲ ಈ ಪದ್ಯದ ಒಳ ಮತ್ತು ಹೊರರೂಪವನ್ನು ಗಮನಿಸಿದರೆ ತಿಳಿಯದು. ಇದರ ಹೊರಗೆ ಬಂದು ''ಕಾಸೀಬಾಯಿಯ ಪದ'' ಗಮನಿಸಿದರೆ, ಮೇಲಿನ ಚರ್ಚೆಗೆ ಇನ್ನೊಂದು ಆಯಾಮ ದೊರೆಕುವುದು ತಿಳಿಯುತ್ತದೆ.

ಹೊತ್ತು ಹೋಂಟು ಹೊರಳ್ಯಾಡಿ ಅಳತಾಳೊ ಭೂಪಿಂಗೆ ತಲೆ ಬಡದಾ
ತಲೆಕೂದಲು ಹರಕೊಂಡು ಎದಿ ಬಡದಾ
ಕಡ್ಡಿಮುಟ್ಟಿ ಟೇಷಣಾಗಿತ್ತು ಸುಂದಾ ||ಹಾಹಾ||
ಕಾಸೀಬಾಯಿಯ ದೆಸಿಂದಾ 3 (ಪು. ೧೨೦-೧೮೦)

ಹೆಣ್ಣನ್ನು ಈ ರೀತಿ ದಾರುಣ ಸ್ಥಿತಿಗೆ ತಳ್ಳುವಲ್ಲಿ ರೈಲು ಮುಖ್ಯವೇ ಅಲ್ಲ. ಅದರ ಹಿಂದಿನ ಸಂಸ್ಕೃತಿಯೂ ಮುಖ್ಯವಾಗಿದೆ. ಈ ಬಗೆಯ ಬಹುತೇಕ 'ಆಧುನಿಕ' ಪದಗಳು ಭೀಕರತೆಯನ್ನು, ನೋವ, ಒಂಟಿತನವನ್ನು ಸೃಷ್ಟಿಸುವ, ಅನ್ಯಾಯವನ್ನು ಮೆರೆಸುವ ಪದಗಳಾಗಿವೆ. ಹಾಗಾಗಿ ಇಲ್ಲಿನ

ಕೋರ್ಟನ್ನು, ರೈಲು ಗಾಡಿಯನ್ನು, ಕ್ರಿಸ್ತನನ್ನು ಪದಗಳಾಗಿ ನೋಡುವುದಕ್ಕಿಂತ ಅದರೊಳಗಿನ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಗಮನಿಸಬೇಕು.

ಇಲ್ಲಿ 'ಮಟಗದ' ಆಟ ಒಂದು ರೀತಿಯ ಆಕ್ರಮಣವನ್ನು (ವ್ಯಕ್ತಿಯ ದಿವಾಳಿತನವನ್ನು) ಸೂಚಿಸಿದರೆ ಇನ್ನೊಂದು ಪದ ಇಡೀ ದೇಶದ ದಿವಾಳಿತನವನ್ನು ಹೇಳುತ್ತದೆ.

ಉದಾಹರಣೆ:

ಹಿಂದುಸ್ಥಾನ ಖಜಾನಿ ಖಾಲಿಮಾಡಿ
ಇಂಗ್ಲೆಂಡಕ ಒಯ್ಯಾಕಾರ ಒಡೋಡಿ
ಬ್ರಿಟೀಶ್ ಪಾರ್ಲಿಮೆಂಟನೊಳು ಕೂಡಿ
ಕಯ್ಯು ತೆಗಿತಾರ ಬಹಳ ಆಡ್ನಾಡಿ'' 4

ಇಲ್ಲೆಲ್ಲಾ 'ವಾಚ್ಯ' ವೆನ್ನಲಾಗುವ ಲಯಗಾರಿಕೆ ಇದ್ದರೂ ಇವು ಒಳಗಿನ ಜೀವಂತ ವಾಗಿರುವ ಮತ್ತು ಚಲಾವಣೆಯಲ್ಲಿರುವ ಹಾಡಿನ ರೂಪಗಳನ್ನುತನ್ನ ಆಕೃತಿಯಾಗಿರಿಸಿ ಕೊಂಡಿರುತ್ತವೆ. ಆಮೂಲಕ ಇವು 'ಶಕ್ತ' ಎನ್ನಲಾಗುವ ಪರಂಪರೆಗೆ ಎದೆಕೊಡುತ್ತವೆ. ಈ ಬಗ್ಗೆ ಕೇವಲ ಅಂದಿನ ಕುತೂಹಲ ಮಾತ್ರವಲ್ಲ, ಆಧುನಿಕ ಕಾವ್ಯ ಸಮಾಜಕೇಂದ್ರಿತ ಬರಹವಾಗುತ್ತಿರುವ ಇಂದಿನ ದಲಿತ ಬಂಡಾಯ ಬರಹಕ್ಕೂ ಇವು ಹತ್ತಿರವಾಗುತ್ತವೆ.

ಉದಾಹರಣೆಗೆ ಚನ್ನಣ್ಣ ವಾಲೀಕಾರರ ರಚನೆ ವಾಲೀಕಾರರು ಇದು'ರಾಮಾಯಣ ಅಲ್ಲ ಮಹಾಭಾರತ'ಅಲ್ಲ ಎಂದು ಹೇಳುತ್ತ ಸಮಾಜದ ಇಂದಿನ ಕರಾಳ ಕಥೆಗಳನ್ನು ಕಾವ್ಯ ಮಾಡ ಹೊರಡುತ್ತಾರೆ. ಹಾಗಾಗಿ ಇವರು ಕೇಳಿಸುವಲ್ಲಿ ನಿವೇದಿಸುವಲ್ಲಿ ಭಿನ್ನರಾಗುತ್ತಾರೆ. ಆ ಪ್ರಕಾರವನ್ನು ಸಂಘಟಿಸುವ ಮತ್ತು ಪ್ರತಿಭಟಿಸುವ ಮಾಡಲೆನ್ನಾಗಿ ಮಾಡುತ್ತಾರೆ. ಹಾಗಾಗಿ ಇವರ ಕವಿತೆಗಳಲ್ಲಿ

ಕಥೆಮಾಡಿ ಹೇಳ್ತೀವಿs। ಕೋಲ ಕೋಲೆ।
ನೋಡಿದ್ದು ತಿಳಸ್ತೀವಿs। ಕೋಲು ಕೋಲೆ। - ಎನ್ನುವಆರಂಭದ ಜೊತೆಯಲ್ಲೇ
ಎಲ್ಲಾರು ಕೈಹಚ್ಚಿ। ಕೋಲು ಕೋಲೆ।

ಗ್ಯಾಸ್ತ ಕುಂತಾರೆ। ಕೋಲು ಕೋಲೆ।'' 5 ಎನ್ನುವ ಅಂತ್ಯ ಕೂಡಮುಖ್ಯವಾಗಿದೆ. ಈ ಬಗೆಯ ಕೆಲಸವನ್ನು 'ಪಾರ್ವತಿ ಹುಸೇನಬಿಯರ ಬುರ್ರಕಥಾ' (ಕುದುರೆಮೋತಿ) 'ಮಾದರ ಶಾಬವ್ವನ ಕೋಲಿನಪದ', ಕವನಗಳು ಖಂಡಿತ ಯಶಸ್ವಿಯಾಗಿಸಿವೆ. ಪಾಟೀಕಾರರ 'ಇಷ್ಟುವಾದ' ಬರಹದಲ್ಲೂ ಈ ಬಗೆ ಬಂದದ್ದು ಅವರ ಅನುಕರಣೆ ಲೋಪವಲ್ಲ ಎನ್ನುವುದಕ್ಕೆ ಇವು ಉದಾಹರಣೆಯಾಗ ಬಲ್ಲವು.

ಅಧ್ಯಾಯ-3

## ಬಯಲು ಆಲವಿಗೆ ನವಿಲು ಕುಣಿದು ನಿಂತು . . . .

ಹಾಡುವ ಪರಂಪರೆಯ ಮೂಲಕ ಆಧುನಿಕ ಕಾವ್ಯಕ್ಕೆ ಮತ್ತೊಂದು ಬಗೆಯ ಪ್ರೇರಣೆ ಕೊಟ್ಟವರು ತತ್ವಪದಕಾರರು. ಹಾಗೆ ನೋಡಿದರೆ ಶರೀಫರ ರಿವಾಯತ ಪದಗಳು ಲಾವಣಿ ಸಂಪ್ರದಾಯಕ್ಕೇ ಸೇರಿದವು.

ಆಧುನಿಕ ಕಾವ್ಯಕ್ಕೇ ಭಾಷೆಯ ಬಳಕೆ ಕುರಿತು ಸೂಚನೆ ನೀಡಬಲ್ಲ ತತ್ವಪದಕಾರರು, ಪ್ರಾದೇಶಿಕ ವೈವಿಧ್ಯತೆಯನ್ನು ತಂದವರು.

''ಬಯಲು ಆಲವಿಗೆ ನವಿಲು ಕುಣಿದು ನಿಂತು
ತೈಲವಿಲ್ಲದ ಜ್ಯೋತಿ ಬೆಳಕು ಮರಿನದಿ''1 ಎನ್ನುವಾಗ

ಇಲ್ಲಿ ಕುಣಿಯುವ ನವಿಲು ಹೊಸ ರೀತಿಯದು. ಹೀಗೆ ಹೇಳುವ ಭಾಷೆಯೂ ಕೂಡ ಹೊಸ ಬಗೆಯದು. ಹೊಸ ಕಾಲದ ಅನೇಕ ಮುನ್ಸೂಚನೆಗಳನ್ನು ನೀಡಬಲ್ಲ ಅರಿವು ತತ್ವಪದಕಾರರಲ್ಲಿದೆ. ಹಾಗಾಗಿ ನಾವು ಪಠರಾಡುವ ಪಂದೊಳಗೇ ಅವರು ಕಿರಸ್ತಾನ ಬಾದಶಹನ್ನು, ವಿಕ್ಟೋರಿಯಾ ರಾಣಿಯನ್ನು, ಇಂಗ್ಲಿಕ್ಕರ,

ಡಾಕ್ಟರ, ಸರ್ಕಾರಿ ಮಾಸ್ತರನನ್ನು ಗಮನಿಸುತ್ತಾರೆ; ಗಿರಣಿ ಕುರಿತು, ಬಜಾರ ಕುರಿತು, ಪ್ರತಿಕ್ರಿಯಿಸುತ್ತಾರೆ.

ಪಲ್ಲಕ್ಕಿ ದಂಡಿಗೆ ಯಾದೆ
ಪತ್ತಿಗೆ ಬುಟ್ಟಿಯಾದೆ
ಎಲ್ಲಮ್ಮನ ಗುಡ್ಡದೊಳಗೆ ಅಡ್ಡಿಗಿನಾದೆ ॥
ತಿಪ್ಪಿಯು ಕೆಳಗಿದ್ದ
ಅದರುದ್ದ ಬೆಳೆದಿದ್ದ
ಸಿದ್ಧರಾಮೇಶ್ವರನಿಗೆ ನಂದಿಕೋಲಾದೆ॥ 1

ತಟ್ಟನೆ ಓದಿದರೂ ಈ ಪದ್ಯದೊಳಗೆ ಕೂಡಿಸುವ, ಜೋಡಿಸುವ ಕೆಲಸ ಕಂಡುಬರುತ್ತದೆ. ಇಲ್ಲಿ ಪಲ್ಲಕ್ಕಿಯನ್ನ ಅಡ್ಡಿಗಿಯನ್ನ, ತಿಪ್ಪಿಯನ್ನ, ನಂದಿಕೋಲನ್ನ ಜೋಡಿಸುವಕ್ರಿಯೆ ನಮ್ಮಲ್ಲಿ ಅಂದುಕೊಂಡು ಬರುತ್ತಿರುವ 'ಮೇಲು' 'ಕೀಳು' ಸಾಂಕೇತಿಕ ಪರಿಭಾಷೆಯನ್ನ ಒಟ್ಟ್ಯಾಗಿಸುವ ಪ್ರಯತ್ನದಂತೆ ಕಾಣುತ್ತದೆ. ಇನ್ನು ಇಂದು ಆಧುನಿಕ ಕಾವ್ಯ ಸಂದರ್ಭದೊಳಗೆ 'ಕಡೆಗಣಿತ' ಮತ್ತು 'ವಿಸರ್ಜಿತ' ಸಂಸ್ಕೃತಿಯನ್ನ, ಪ್ರತಿಮೆಗಳನ್ನ ಎತ್ತಿ ಲಕ್ಷಿತವಾದ ಅಂದರೆ ಹಾಲೀ ಚಲಾವಣೆಯೊಳಗಿರುವ ಓಮ್ಮತಕ್ಕೆ ಎಲ್ಲಮ್ಮನನ್ನು, ಸಿದ್ಧರಾಮೇಶ್ವರನನ್ನು ತರುವಂತಿದೆಯೋ ಗೊತ್ತಿಲ್ಲ. ಏಕೆಂದರೆ ಇದನ್ನ ಸರಿ ಎಂದ ಪಕ್ಷದಲ್ಲಿ ಶರೀಫರು (೧೮೧೯-೧೮೯೦) ಎಲ್ಲಮ್ಮನನ್ನು ಒಪ್ಪಿಕೊಂಡು ದೇವದಾಸಿ ಪದ್ಧತಿಯನ್ನು ಒಪ್ಪಿ ಬಿಡುತ್ತಾರೋ ಎಂಬ ಭಾವ ಮೂಡಿಬಿಡುತ್ತದೆ.

ತತ್ವಪದಗಳು ಗತಕಾಲದ ಪರಂಪರೆಯೊಂದಿಗೆ ಹರಿದುಬಂದ ಕಾವ್ಯ ಪ್ರವಾಹ ಮಾತ್ರವಲ್ಲ. ಅವು ಗತಕಾಲದ ಆಯಾ ಸಂಸ್ಕೃತಿಯೊಳಗೇ ವಿಭಿನ್ನತೆಗಾಗಿ, ವೈವಿಧ್ಯತೆಗಾಗಿ ಹೆಣಗುತ್ತಲೇ ಸಂಕೀರ್ಣ ಅರ್ಥವನ್ನು ಹೊಮ್ಮಿಸುವಂತವು. ''ಮಠದ ಪ್ರವಚನಗಳಲ್ಲಿರುವಂತೆ ಇಲ್ಲಿ ಶ್ರೋತೃಗಳಿಲ್ಲ. ಎಲ್ಲರೂ ಭಾಗಿಗಳು. ಪವಿತ್ರಗ್ರಂಥಗಳನ್ನ ಓದಿ ಹೇಳುವ ಸಂಸ್ಕೃತಿ ಇದಲ್ಲ. ದೇಗುಲ, ಶಾಸ್ತ್ರ, ಪುರಾಣ, ಪುರೋಹಿತ, ಜಗದ್ಗುರು ಈ ಮುಂತಾದ ವರ್ತುಲಗಳಿಂದ ದೂರ ಉಳಿದ ಬೇರೆ ಬೇರೆ ವೃತ್ತಿಗಳ ಸ್ತ್ರೀಪುರುಷರು ಆಬಾಲವೃದ್ಧರಾಗಿ ಪಾಲುಗೊಳ್ಳುವ ಈ ಆಚರಣೆಗೆ ಈ ವಾತಾವರಣ ಎಲ್ಲ ಭಾಗಿಗಳಿಗೆ ತಮ್ಮ ಬದುಕಿನ ವಿವರಗಳ ಮೂಲಕ ಬೇರೊಂದು ಬೆಳಕನ್ನ ಕಾಣುವ, ಬೇರೊಂದು ಬೆಳಕಿನ ಮೂಲಕ

ನಮ್ಮ ದೈವಿಕ ವಿವರಗಳನ್ನು ನೋಡುವ ಇಹಪರದ ದ್ವಂದ್ವಗಳು ದಾಟಿದ ಅವಕಾಶವನ್ನು ಒದಗಿಸಿಕೊಡುತ್ತವೆ. ಇಲ್ಲಿ ದುಡಿಮೆಯ ನಂತರದ ಪುರುಷೋತ್ತಮ್ಮ ರಂಜಕಗೊಳಿಸುವ ಮನರಂಜನೆ, ದಣಿವನ್ನು ಹಗುರವಾಗಿಸುವ ಹಾಸ್ಯ, ಮುಂದುಡಿದ ಮನಸ್ಸನ್ನು ತೆರೆಸುವ ಅರಿವುಗಾಣುವಿಕೆ ಎಲ್ಲವೂ ಮೇಳೈಸಿವೆ.ತತ್ವಪದದ ಸಂಸ್ಕೃತಿ ಹಲವು ಸಾಮಾಜಿಕ ವಿಯೋಗಗಳನ್ನು ನೆರವೇರಿಸುವ ಬಗೆಯುಂದು'',2

ಈ ತತ್ವಪದಗಳು ಇಂದು ಎಚ್. ಎಸ್. ಶಿವಪ್ರಕಾಶ್ ಕೇಳಿಕೊಳ್ಳುವ ''ಜಗತ್ತು ಧರ್ಮದ್ವೇಷದ ಕೊಂಡ ಹಾಯುತ್ತಿರುವ ಇವತ್ತಿನ ಸಮಸ್ಯೆಗಳಿಂದ ತತ್ವಪದಕಾರರ ಸಾಮ್ಯವನ್ನು ಒಪ್ಪುವ ಏಕತ್ವದ ಕಲ್ಪನೆ ಒಂದು ಒಳದಾರಿಯನ್ನು ತೋರಬಲ್ಲದೇ?''2 ಎಂಬ ಪ್ರಶ್ನೆಯೂ ತಕರಾರನ್ನು ಒಡ್ಡುತ್ತದೆ. ಏಕೆಂದರೆ ಅಂದಿನ ವಚನೇಶ್ವರರು ಮುಸ್ಲಿಂ ''ಪರಿಭಾಷೆ''ಗಳನ್ನು ಬಳಸುವರೇ ವಿನಾ ಎಲ್ಲಿ ಮಾಂಸತಿನ್ನುವ ಬಗ್ಗೆ ಹೇಳಿಲ್ಲ. ಬಹುಶಃ 'ಹಿಂದ್ಯು ಕಳಗಿದ್ದ, ಅದರುದ್ದ ಬೆಳದಿದ್ದ' ಎನ್ನುವ ಮಾತೇ ಅಂದಿನ ಪರಂಪರೆ ಆಲೋಚಿಸುತ್ತಿದ್ದ ಬಯಸುತ್ತಿದ್ದ ಬಗೆಯನ್ನು ಹೇಳುವಂತಿದೆ ಎಂದುಕೊಂಡರೂ 'ಸಂದಿಕೋಲಾ ದೆ ಅಥವಾ ಅಡ್ಲಿಗಿ ಸಾಸಾದೆ' ಎನ್ನುವ ಪದಗಳ ಮೂಲಕ ಯೋಚಿಸುವಂತಿರಲಿಕ್ಕಿಲ್ಲ.

ಪರಂಪರೆಯ ಲಿಖಿತ ಬರಹಗಳಲ್ಲಿ ನಿರ್ಧಾರಿತ ಚೌಕಟ್ಟಿನೊಳಗೇ ಹೊಸತನ ರಾಚನಿಕವಾಗಿ ಮುಂದುವರೆದಿದೆ. ಅಲ್ಲೆಲ್ಲಾ ಅನೇಕ ಒತ್ತಾಸೆಗಳೇ ಮತ್ತೆ ಮತ್ತೆ ಮುನ್ನಡೆಯುತ್ತವೆ. ಅವನ್ನು ಒಡೆಯುವ, ಪ್ರಶ್ನಿಸುವ ಅವ್ವುಗಳಿಗಿರಬಹುದಾದ ಒಳದಾರಿಗಳ ಒಳಪ್ರಜ್ಞೆಗಳನ್ನು ಕುರಿತ ಯೋಚನೆಗಳೂ ಅಲ್ಲವೆ. ಹಾಗಾಗಿ ಆ ಬಗೆಯೂ ಕೂಡ ಎಲ್ಲೋ ಶಿವಪ್ರಕಾಶ್ ಹೇಳುವಂತೆ A ಬಿಂದುವಿನಿಂದ B ಬಿಂದುವಿಗೆ ಸಾಗುವ ಬರಿ ಗೆರೆಯ ಚರಿತ್ರೆಯಾಗಿ ಅದೊಂದು ಜಡಹಾದಿಯಂತೆಯೂ ಕಾಣಲು ಸಾಧ್ಯ.

೧೮ ಮತ್ತು ೧೯ನೆಯ ಶತಮಾನದ ಬಹಳಷ್ಟು ತತ್ವಪದಕಾರರು ಬ್ರಿಟೀಷ್ ವಸಾಹತು ನೀತಿಗೆ ತೀವ್ರವಾಗಿ ಮುಖಾಮುಖಿಯಾಗಿಲ್ಲ. ಇದ್ದುದರಲ್ಲಿ ಶಿಶುನಾಳ ಶರೀಫ, ನಾಗಲಿಂಗಯತಿ, ಕೈವಾರ ನಾರಾಯಣ ತಾತ ಇವರು ಮಾತ್ರ ಹೆಚ್ಚು ಪ್ರತಿಕ್ರಿಯಿಸಿದ್ದಾರೆ. ಕೂಡಲೂರು ಬಸವಲಿಂಗ ಶರಣ ಮತ್ತು ಕಡಕೋಳ ಮಡಿವಾಳಪ್ಪನವರು ಹಲವು ಮುಂಬರುವ ಅಂತಹ ಸೂಚನೆಯನ್ನು ಕಾಣಬಹುದಾದ ರೀತಿ

ನೀಡಬಲ್ಲರೇ ಹೊರತು ಅಷ್ಟು ಸೂಕ್ಷ್ಮತೆ ಅವರ ಪದಗಳಿಗಿಲ್ಲ. ಬಹುಶಃ ಹೀಗಾಗಲು ಕಾರಣ ತತ್ವಪದಕಾರರ ದೃಷ್ಟಿ ''ನಾನಿತ್ತಲೆಳೆದರೆ ತಾನತ್ತಲೆಳೆವುದು, ಇನ್ನೇನಿನ್ನೇನೋ'' ಎನ್ನುವಂತಿತ್ತು. ವ್ಯವಸ್ಥೆಯೊಂದಿಗೆ ಒಟ್ಟಾಗುವುದಕ್ಕಿಂತ ವ್ಯವಸ್ಥೆಯಿಂದ ಬಿಡಿಸಿಕೊಂಡು ಒಂಟಿಯಾಗುವುದರತ್ತ ಅವರು ಹೆಚ್ಚು ಕಾಳಜಿ ವಹಿಸಿದ್ದು, ಅವರಲ್ಲಿ ಈ ಬಗೆಯ ಕಾತರಗಳು, ಸ್ಪಂದನಗಳು ಅಷ್ಟಾಗಿ ಕಾಡಲಿಲ್ಲ ಎನ್ನುವ ಮಾತಿಗೆ ಸಮರ್ಥನೆಯಾದೀತು.

ಇಲ್ಲೂ ಕೂಡ ವಸಾಹತುಶಾಹಿ 'ಪರ-ವಿರೋಧ' ಎಂಬ ಮಾತುಗಳು ತೀರಾ ಸರಳೀಕರಿಸಿದಂತಾಗಬಹುದು. ಇಲ್ಲಿ ಯಾಕೆ ಬರಿ ಪರಿಭಾಷೆಗಳನ್ನು ಸ್ವೀಕರಿಸಿದ್ದಾರೆ? ಅವರು 'ಹೂಜ'ಯಂತಹ 'ಗಿರಣಿ'ಯಂತಹ ಪದಗಳನ್ನು ಯಾಕೆ ಆಧ್ಯಾತ್ಮಿಕ ಪರಿಭಾಷೆಯಾಗಿ ಮಾರ್ಪಡಿಸಿಕೊಂಡಿಲ್ಲ? ಈ ಪದಗಳು ಒಮ್ಮೊಮ್ಮೆ ದಿಗ್ಭ್ರಮೆ, ರೋಮಾಂಚನಗಳಾಗಷ್ಟೇ ಆಗಿ ಯಾಕೆ ಉಳಿಯುತ್ತವೆ? ಎಂಬ ಹಲವು ಪ್ರಶ್ನೆಗಳೇ ಅನೇಕ ಉತ್ತರಗಳಿಗೆ ಮುಖಮಾಡುತ್ತವೆ.

ಮೇಲು ನೋಟಕ್ಕೆ ನಾವು ಶರೀಫರನ್ನು 'ಪರ-ವಿರೋಧ'ಗಳ ಚರ್ಚೆಗಾಗಿ ನಿಂತುಬಿಟ್ಟರೆ ಅವರನ್ನು ಸಂಪೂರ್ಣ ಬದುಕಿನ ಪರ ಎಂಬ ವಾದದಿಂದ ನೋಡಿದಂತಾಗುತ್ತದೆ. ಏಕೆಂದರೆ ಅಂತಿಮವಾಗಿ ಅವರ ನಿಲುವೇ ಇದಲ್ಲ, ಬದಲಿಗೆ ಲೌಕಿಕ ಶಬ್ದಲೋಕದಿಂದ ಆಧ್ಯಾತ್ಮಿಕ ಅರ್ಥ ಲೋಕದತ್ತ ನಡೆಯುವವರಾಗಿಯೂ ಅವರು ನಮಗೆ ಕಾಣುತ್ತಾರೆ.

ನಾಡ ಮಾತುಗಳ ನಾಡಬಲ್ಲಿ
ಬಾಯಿ ಲ್ಹೇಳ ವಲ್ಲಿ।
ನೀ ನಾಡು ಮಾತಿನೊಳಗೆ ನಾದ್ಹೇಳವಲ್ಲಿ
ಮಾತು ಕೇಳವಲ್ಲಿ ॥ 3

ಈ ಮೂಲಕ ತತ್ವ ಪದಕಾರರನ್ನು ಎರಡೂ ಬಗೆಯ ದೃಷ್ಟಿಯಿಂದ ನೋಡಲು ಸಾಧ್ಯವಿದೆ.

೧) ದೇಶೀಯ ವಸಾಹತುಶಾಹಿಯ ನೆಲೆಯಿಂದ

೨) ವಿದೇಶೀಯ ವಸಾಹತುಶಾಹಿಯ ನೆಲೆಯಿಂದ

ಇವನ್ನು ಹೀಗೆ ವಿವರಿಸಬಹುದು:

1) ಪಾರಂಪರಿಕ ಗತಿಯಲ್ಲಿ ಒಂದು ಸಂಸ್ಕೃತಿ ಹಲವು ಸಂಸ್ಕೃತಿಗಳನ್ನು ತನ್ನಿಂದಾಚೆ ಅರಳಿಕೊಳ್ಳಲು ಅವಕಾಶವಾಗದಂತೆ ಮಾಡಿದ ಒತ್ತಡಗಳ ವಿರುದ್ಧ ತನ್ನ ರಾಚನಿಕ ಹಾಗೂ ತಾತ್ವಿಕ ಚೌಕಟ್ಟನ್ನು ವಿಸ್ತರಿಸಿಕೊಂಡದ್ದು.

2) ವಿದೇಶೀಯ ಅಥವಾ ಪರಕೀಯ ಸಂಸ್ಕೃತಿಯೊಂದು ಆರ್ಥಿಕವಾಗಿ ಆವರಿಸುತ್ತ ಇಲ್ಲಿನ ಸಂಸ್ಕೃತಿಯನ್ನು ಅನುಕರಣ ಶೀಲ ಮತ್ತು ದೈನ್ಯ ಸ್ಥಿತಿಗಿಳಿಸುವುದರ ವಿರುದ್ಧ ಸಿಡಿಯುವುದು.

ಈ ಎರಡ ಸಂದರ್ಭದಲ್ಲಿ 'ವೈದಿಕ' ವಾದದ್ದು ಸ್ವದೇಶೀಯ ವಸಾಹತುಶಾಹಿಯಾದರೆ ಬ್ರಿಟಿಷರದು ವಿದೇಶೀಯ ವಸಾಹತುಶಾಹಿ. ವೀರಶೈವ ವಚನ ಸಾಹಿತ್ಯ ಮೊದಲು ಅಕ್ಷರ ಯುಗದಲ್ಲಿ ಅತ್ಯಂತ ಪರಿಣಾಮಕಾರಿಯಾಗಿ 'ಮೇಲು' ಎಂಬ ಸ್ವದೇಶೀಯ ಭ್ರಮೆಯನ್ನು ಸೀಳಿ ಸನಾತನ ವ್ಯವಸ್ಥೆಯನ್ನು ಬದಲಾಯಿಸುವ ಪ್ರಕ್ರಿಯೆಗೆ ಬುನಾದಿ ಹಾಕಿದ್ದರೂ, ಹಲವು ಬಗೆಯಲ್ಲಿ ಅನಂತರದ ತತ್ವ ಪದಕಾರರು ಅವರನ್ನೂ ಮೀರಿ ಒಂದು ಹೆಜ್ಜೆ ಮುನ್ನಡೆದಿದ್ದಾರೆ.

ದಿಳ್ಳಿಖಾನರ ಆಳಿವಾದಿನ ಬಂತು ಸುದ್ದಿ
ಬಜಾರ ಬಂದಿತು ವ್ಯಾಜ್ಯ ಉಂಟಾದಿತು।
ಸೂಜಿ ಹೊನ್ನಿಗೊಂದು ಮಾರಿತು ಸುದ್ದಿ
ಮರ್ತ್ಯದಾ ಸೋಜಿಗವ ನೋಡೊ ಬಸವಣ್ಣ [2]

ತತ್ವಪದಕಾರರು 'ಬಜಾರನ್ನು', 'ವ್ಯಾಜ್ಯವನ್ನು', ಒಂದೆಡೆ ತರುತ್ತಲೇ ವಿದೇಶೀಯ ಆರ್ಥಿಕ ಆವರಿಕೆಯ ಭೀಕರಚಿತ್ರವನ್ನು ಕೊಡುತ್ತಾರೆ. ಅಂತಲೇ ಸೂಜಿ, ಇಲ್ಲಿಯ ಅತ್ಯಂತ ಬೆಲೆಯುಳ್ಳ ಹೊನ್ನಿಗೆ ಸಮವಾಯಿತು. 'ಬಜಾರ'ದ ಜೊತೆಗೆ ಕಣ್ಣು ಕಟ್ಟುವ ಬಣ್ಣದ ಅಂಗಿಗಳು, ಬೆಲೆಗಳು, ಇವು ದಿಳ್ಳಿಖಾನರ ಸನಾತನತೆಯನ್ನು ಕದಡಿಸುವಷ್ಟು ಸೋಜಿಗ ಒತ್ತುತ್ತಿದೆ. ವಿರೋಧ ಹುಟ್ಟುವಲ್ಲಿ ಸಂಘರ್ಷವನ್ನು

ಕಟ್ಟುತ್ತಿದೆ. ಹೀಗಾಗಿ ಬ್ರಿಟಿಷ್ ಆಗಮನವೇ ಭಾರತಕ್ಕೆ ಅನೇಕ ಆಕರಗಳ ಸಂಕೀರ್ಣ ಲೋಕವಾಗಿ ಕಾಣುತದೆ. ಅಂತಲೇ ಬ್ರಿಟಿಷ್ ಆಗಮನವನ್ನು ಕುರಿತು ತತ್ವ ಪದಕಾರರು

೧) ಆರ್ಥಿಕ ಶೋಷಣೆಯ ಹಿನ್ನೆಲೆಯಲ್ಲಿ ಪ್ರತಿಕ್ರಿಯಿಸಿದ್ದಾರೆ.

೨) 'ಗಿರಣಿ ವಿಸ್ತಾರ'ವನ್ನು ಸಂಭ್ರಮವೆಂದು ಕಂಡಿದ್ದಾರೆ.

೩) ಯಂತ್ರಗಾರಿಕೆಯಿಂದ ನಾಶವಾಗಲಿರುವ ಇಲ್ಲಿನ ಕುಶಲ ಗುಡಿ ಕೈಗಾರಿಗಳ ಕುರಿತು ಮಿಡಿದಿದ್ದಾರೆ.

೪) ರಾಜಕೀಯ ಮತ್ತು ಸಾಮಾಜಿಕ ಅಸಹಾಯಕತೆಯನ್ನು ವಿವರಿಸಿದ್ದಾರೆ.

೫) ನಗರೀಕರಣದ ಆರಂಭಿಕ ಬೆಳಗಿನ ಜೊತೆಗೆ ಅದು ಅನಂತರ ತರಲಿರುವ ವಿಷಮ ಪರಿಣಾಮವನ್ನು ಕುರಿತು ಕೊರಗಿದ್ದಾರೆ.

೬) [illegible] ಗಿರಣಿ, ಬ್ರಿಟೀಷರು, ಸೂಜಿ ಇತ್ಯಾದಿಗಳ ಮೂಲಕ 'ಆಧುನಿಕ' ರೂಪವನ್ನು ಪದಗಳಲ್ಲಿ ಬಳಸಿಕೊಂಡಿದ್ದಾರೆ.

ಈ ರೀತಿಯ ಅಭಿಪ್ರಾಯಗಳನ್ನು ಗ್ರಹಿಸುತ್ತಲೇ ನೋಡಿದಾಗ ಆ ಕಾಲದಲ್ಲಾಗಲೇ ದುಡಿಯುವ ಜನ ಬಿಂಕದ ಬಂಟರಾಗುತ್ತಿರುವ ಸೂಚನೆಯನ್ನು ಕೂಡಲೂರು ಬಸವಲಿಂಗ ಶರಣರು ಸೂಚಿಸುತ್ತಾರೆ. ಇಲ್ಲಿ ಗೋಮಾಳದಿಂದ ಮೊದಲ್ಗೊಂಡು ಬಂಜರುಭೂಮಿಗಳ ವರೆಗೂ ಗುತ್ತಿಗೆ ನೀಡಲಾಗುತ್ತದೆ ಎಂಬುದನ್ನು, ಕೈವಾರ ನಾರಾಯಣ ತಾತಯ್ಯ ಹೇಳುತ್ತಾರೆ. 'ದೊರೆಗಳೆಲ್ಲಾ ಮುರಿದುಬೀಳುತ್ತಾರೆ, ಶ್ವೇತ ಕೃಷ್ಣಾದಶಹ ಪಟ್ಟಣಕ್ಕೆ ಬರುತ್ತಾನೆ' ಎಂಬುನ್ನ ಶರೀಫರು ತಿಳಿಸುತ್ತಾರೆ. ಹೀಗಾಗಿ ಇದೀ ತತ್ತ್ವಪದಕಾರರಿಗೆ ಸ್ವೀಕರಣೆ ಮತ್ತು ನಿರಾಕರಣೆಯ ನಡುವೆ ತೀವ್ರ ಎಚ್ಚರವೊಂದು ಇದೆ. ಅವರಿಗೆ ವೈಜ್ಞಾನಿಕತೆ ಕುರಿತು, ಅವರ ಶಿಕ್ಷಣಕುರಿತು, ಸೋಜಿಗ-ದಿಗ್ಭ್ರಮೆ-ಒಮ್ಮತಗಳಿರುವವೇ ವಿನಾ ಬ್ರಿಟೀಷರ ನೆಲೆಗಟ್ಟುಗೊಳ್ಳುವುದರ ಬಗ್ಗೆ ಅವರಿಗೆ ಸಂಪೂರ್ಣ ಅಸಮ್ಮತಿ ಇದೆ.

ಶಾಲಿಯ ನೋಡಿದಿಯಾ ಸರಕಾರದ
ಶಾಲಿ ಸದ್ಗುರುವಿನ ಮಾಲು ಮಂಟಪವಿದು
ಮೇಲು ಕಾಣುತಿದೆ ಭೂಲೋಕದೊಳು [1]

ತತ್ತ್ವಪದಕಾರರು ಅಕ್ಷರದ ಆಗಮನವನ್ನು ಅಯ್ಯನ ಶಾಲೆಗಳಿಗಿಂತಲೂ ಭಿನ್ನವಾಗಿ, ಎಲ್ಲರನ್ನು 'ಏಕ'ರೂಪವಾಗಿ ಕಾಣುವ ಸರಕಾರದ ಶಾಲೆಯನ್ನು 'ಮೇಲಾಗಿ' ನೋಡುತ್ತಾರೆ; 'ಸದ್ಗುರುವಿನ ಮಂಟಪ'

ವೆಂದು ಬೆರಗು ಮಾಡುತ್ತಾರೆ. ಹಾಗಾಗಿ ಈ ಬಗೆಯ ಆಧುನಿಕ ಮಾಸ್ತರ ಸಹಜವಾಗಿ ಶಿಕ್ಷಣ ವಿಸ್ತಾರ ಮಾಡುವಂತಹ ಬಗೆ ಅವರಿಗೆ ಒಂದು ಬಗೆಯ ಆತ್ಮೀಯ ಮೋಜೆನಿಸಿದೆ, ಆಶ್ಚರ್ಯ ಸೋಜಿಗವಾಗಿದೆ. ಕೂಡಲೂರು ಬಸವಲಿಂಗ ಶರಣರು "ಹಲವು ದೇಶಗಳ ತಿರುಗಿ ನಾನಾ ಭಾಷೆಯ ಕಲಿತು, ಬಲು ಶಾಸ್ತ್ರಜ್ಞರಾದವರು ಪಂಡಿತರೇ ?" ಎಂದು ಪ್ರಶ್ನಿಸುತ್ತಾ ಮತ್ತೆ ಓದು, ನಾನಾ ಭಾಷೆ, ದೇಶ ವಿದೇಶಗಳ ಪರಿಚಯಗಳ ಚೌಕಟ್ಟನ್ನು ಬಯಸಿ ಹೊರಟ ಸಂಸ್ಕೃತಿಯನ್ನು ಮತ್ತು ಆಧ್ಯಾತ್ಮಿಕ ಜ್ಞಾನದ ಸಾಧನ ಚೌಕಟ್ಟಿಗೇ ಅಳವಡಿಸಲು ಹವಣಿಸುತ್ತಾರೆ.[4] ಈ ನಿಟ್ಟಿನಲ್ಲಿ ಪಂಡಿತರಲ್ಲವೇ ? ಎಂಬ ತುಂಬ ಪ್ರಶ್ನೆ ಎಸೆದರೂ ಅದೇ ಸರಿ ಎನಿಸದಿರದು, ಆದರೆ ಅದನ್ನೇ ಸರಿಯೆಂದು ರೋಮಾಂಚನಗೊಂಡು ವಿವರಿಸುವ ಡಾ|| ಎಂ. ಜಿ. ಶಾಸ್ತ್ರೀ ಮುಂತಾದ, ಏಕ ಮುಖವಾದವನ್ನು ಒಪ್ಪಲು ಸಾಧ್ಯವಿಲ್ಲ. ಇಡೀ ಅಕ್ಷರ ಜಗತ್ತನ್ನು ಏಕಾಏಕಿ ತಿರಸ್ಕರಿಸಿ ಅಥವಾ ಪುರಸ್ಕರಿಸಿ ನೋಡುವ ಕ್ರಮಕ್ಕಿಂತ ಅವರ ತಾತ್ವಿಕ ಚೌಕಟ್ಟು ನಮಗೆ ಬೇಕಾದ ಎಳೆಗಳನ್ನು ಸ್ವೀಕರಿಸಲು ಸಾಧ್ಯವಿದೆ ಎಂದೂ ಅನಿಸಬಹುದಲ್ಲವೇ ?

ಹೀಗೆ ನೋಡಿದಾಗ ಮಾತ್ರ ಕಡಕೋಳ ಮಡಿವಾಳೇಶ್ವರರು ತೀವ್ರವಾಗಿ ಪ್ರತಿಕ್ರಿಯಿಸಿದ್ದನ್ನು ಶರೀಫರು ಸಂಭ್ರಮದಿಂದ ಕಂಡದ್ದನ್ನು ವಿವರಿಸಿ ಕೊಳ್ಳಲು ಸಾಧ್ಯ. ಹಾಗೆ ನೋಡಲು ಸಾಧ್ಯವೆನ್ನುವಂತಹ ಅವರ ಪದ್ಯಗಳನ್ನು ಉದಾಹರಣೆ ನೀಡಬಹುದು:

೧. ಬಲ್ಲಂತ ಜ್ಞಾನಿಗಳು ಬಲ್ಲಷ್ಟು ಹೇಳಿದರ
ಅಲ್ಲಂತ ಅನಬಾರದು ಎಲೆ ಮನವೆ।
ಹಿರಿದವರ ಮುಂದೆ ಜಾರಿ ಬೀಳದಂತೆ
ಪಾರಾಗಿ ಹೋಗ ಬೇಕು ಎಲೆ ಮನವೆ .

೨. ನಮ್ಮ ಒಳಗ ನಾ ತಿಳಕೊಂಡೆ । ನನಗ
ಬೇಕಾದ ಗಂಡನ ಮಾಡಿಕೊಂಡೆ
ಆಜ್ಞಾ ಪ್ರಕಾರ ನಡಕೊಂಡೆ
ನಾ ಎಲ್ಲರ ಹಂಗೊಂದು ಹರಕೊಂಡ ॥ . 4

ಇರುವೊಂದು ಕನ್ನಡಿಯು ನೂರಾರು ಜನ ಪಡಿಯು ...

---

ಕಾವ್ಯ ಚರ್ಚೆಯ ಸಂದರ್ಭದಲ್ಲಿ 'ಆಧುನಿಕ' ಎನ್ನುವ ಪದಕ್ಕೆ ಹತ್ತಿರವಾಗಿ ಎಲ್ಲಾ ದೃಷ್ಟಿಯಿಂದಲೂ ಮೊದಲಾಗುವ ವಚನಕಾರರಿಗೂ ಮತ್ತು ತತ್ವ ಪದಕಾರರಿಗೂ ವಸ್ತು, ಸಂಸ್ಕೃತಿ, ಭಾಷಾ ಬಳಕೆ ಹಾಗೂ ರಚನಾ ವಿಧಾನಗಳಲ್ಲೂ ಹಲವು ವ್ಯತ್ಯಾಸಗಳಿವೆ. ಅವನ್ನು ಸ್ಥೂಲವಾಗಿ ಹೀಗೆ ಗ್ರಹಿಸಬಹುದು.

೧) ವಚನಗಳ ಭಾಷೆ ಮತ್ತು ಬಂಧಗಳಲ್ಲಿ ಏಕಶಿಲಾಕೃತಿಯ ಅಭಿವ್ಯಕ್ತಿ ಇದೆ. ಒಬ್ಬ ವಚನಕಾರ ಯಾವುದೇ ವೃತ್ತಿ - ಜಾತಿ ಅಥವಾ ಪಂಥಕ್ಕೆ ಸೇರಿರಲಿ ವಚನಗಳ ಭಾಷೆ ಏಕರೂಪಿಯಾಗಿ ಕಾಣುತ್ತದೆ. ಪ್ರಾದೇಶಿಕವಾದ ಪ್ರಾಂತಭೇದಗಳು ವಚನಗಳಲ್ಲಿ ಕಂಡು ಬರುವುದಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ತತ್ವಪದಗಳ ಭಾಷೆ ಮತ್ತು ಬಂಧಗಳು ಬಹುಮುಖವಾಗಿ ಪ್ರಕಟಗೊಂಡಿವೆ. ಪ್ರಾದೇಶಿಕ ಪ್ರಾಂತಭೇದಗಳಿಗೆ ಅನುಗುಣವಾಗಿ ತತ್ವಪದಗಳನ್ನು, ತತ್ವಪದಕಾರರನ್ನು ವಿಂಗಡಿಸಬಹುದಾಗಿದೆ.

೨) ವಚನಗಳಲ್ಲಿನ ಕಾಯಕ ನಿಷ್ಠೆಯು ರೂಪಕ, ಪ್ರತಿಮೆ ತತ್ವಪದಗಳಲ್ಲಿಲ್ಲ.

೩) ಏಕಶಿಲಾಕೃತಿಯ ರಚನೆಯ ಜೊತೆಗೆ ಏಕದೇವತಾ ವಾದ ವಚನಕಾರರಲ್ಲಿದ್ದರೆ ಬಹುಮುಖ ದೃಷ್ಟಿಯ ರಚನೆಗೆ ಪೂರಕವಾಗಿ ತತ್ವಪದಕಾರರಿಗೆ ಪ್ರಿಯವಾದ ತಾತ್ವಿಕ ದೃಷ್ಟಿ ಬಹುದೇವತಾವಾದ. ಇದನ್ನು ಪ್ರಶ್ನಿಸಲೂ ಸಾಧ್ಯವಿದೆ. ಪದ್ಯಗಳ ಆಕೃತಿಯನ್ನು ಕುರಿತು ಯೋಚಿಸುವಾಗ ಶರೀಫರ ''ದೋಷ ಒಂದೇ ವಿದೋಷ ಒಂದೇ, ಶಿಶುನಾಳ ಧೀಶನ ಭಾಷೆ ಒಂದೇ, ಭವ ನಾಶ ಒಂದೇ'' ಎನ್ನುವ ಪದ್ಯ ನೆನಪಿಗೆ ಬರುತ್ತದೆ.

ಆಕೃತಿಯ ಜೊತೆಗೆ ಪರಂಪರೆಯು ಇಲ್ಲಿಯವರೆಗೆ ಒಮ್ಮತವಾಗಿ ಮುನ್ನುಗ್ಗಿ ಹರಿದ ಬಗೆಯನ್ನು ನೋಡಿದ್ದೇವೆ, ಒಂದು ಭಾಷೆ, ಒಂದು ಧರ್ಮವನ್ನೇ ಕೇಂದ್ರವಾಗಿ ಇಟ್ಟುಕೊಳ್ಳುವ ಅದ್ವೈತ, ಕಾವ್ಯಕ್ಕಿರುವ ನಿಯಮಗಳ ಪಾಲನೆ, ಅಂದರೆ ಅದರ ಗೇಯತೆ, ಮಧುರತೆ, ರಮಣೀಯತೆ ಇತ್ಯಾದಿಗಳನ್ನೆಲ್ಲಾ ಮೀರಿ ಕಾವ್ಯಕ್ಕೆ ಮತ್ತೊಂದು ಭಾಷೆಯನ್ನು ಜೋಡಿಸಿದ, ಕಾವ್ಯವನ್ನು ಪ್ರಾಸಬದ್ಧ

ನಾಟಕಗಳ ಡೈಲಾಗ್‌ಗಳಂತೆ ಇಟ್ಟು ನೋಡುವ. ಏಕಾಏಕಿಯಾಗಿ ತೀರಾ ವಾಚಾಳಿಯಂತೆ ಯಾವುದೇ ಎಗ್ಗಿಲ್ಲದೆ 'ಅಶ್ಲೀಲ' ಎನ್ನುವ ಪದಗಳನ್ನು ಬಳಸುವ ಕ್ರಿಯೆಗಳು ಇವರ ಕಾವ್ಯದೊಳಗೆ ಜಾಗ ಪಡೆದಿವೆ. ಈ ರೀತಿ ಇವರು ಕವಿತೆಗಳನ್ನು ರಚಿಸಲು ಕಾರಣ, ಕಾವ್ಯಕ್ಕಿರುವ ಬಹುಸಾಧ್ಯತೆಯನ್ನು ಕಂಡು ಕೊಳ್ಳುವುದೊ ಅಥವಾ ಆ ಮೂಲಕ ಹಲವು ಸಂಸ್ಕೃತಿಗಳ ಭಾಷೆಗಳನ್ನು ಬೆಸೆದು ನೋಡುವ ಕಾತುರತೆಯೋ ? ಅಥವಾ ಯಾವುದೋ ಸ್ಫೂರ್ತಿಯುಗಳಿಗೆಯಲ್ಲಿ ಹಿಡಿದ ಮಾತುಗಳೇ ಪದ್ಯಗಳೆಂದು ಪರಿಗಣಿಸಲ್ಪಟ್ಟಿವೆಯೋ ಗೊತ್ತಿಲ್ಲ. ಕೆಲವು ಉದಾಹರಣೆಗಳನ್ನು ಹೀಗೆ ಗಮನಿಸಲು ಸಾಧ್ಯವಿದೆ.

ಉರ್ದು ಕನ್ನಡದ ದ್ವಿಭಾಷಾ ಬಳಕೆಗೆ

ಸಬ್ ಕಹತೇ ಈಶ್ವರ್ ಅಲ್ಲಾ
ಇದರ ಬೇಧ ಯಾರಿಗೆ ತಿಳಿಯಲಿಲ್ಲಾ ॥
ನಿರಾಕಾರಸೆ ಆಕಾರ ಹುವೇ
ವೇದ ಶಾಸ್ತ್ರಕೆ ನಿಲುಕಲಿಲ್ಲ
ಹಿಂದೂ ಮುಸಲ್ಮಾನ ಶಾಸ್ತ್ರ ಪಢತ ಹೈ
ಗುರುಮನಿ ಕೀಲ ಸಿಗಲಿಲ್ಲ ॥

- ಕಡಕೋಳ ಮಡಿವಾಳೇಶ್ವರ.

ಎವರಿಕು ಚಿಪ್ಪೆದ

ನೀತಿ ಎರಗ ರಾಷಿಕು

ಭೃಗ್ಯ ಮೊಹ್ತಿರೋ .

- ಕೂಡಲೂರು ಬಸವ ಲಿಂಗ ಶರಣ.

ಹಾಗೆ ನೋಡಿದರೆ ಇವು ಪದ್ಯಗಳೇ ಅಲ್ಲ. ಇವು ಪದ್ಯದಂತೆ ಜೋಡಿಸಿದ ಗದ್ಯಗಳು ಅಥವಾ ಮಾತುಗಳು ಎನ್ನಲೂ ಸಾಧ್ಯ. ಆದರೆ ಈ ಬಗೆಯ ಜಾತಿ, ಧರ್ಮ, ದೇವರುಗಳನ್ನು ಒಂದೆಡೆಗೆ ತರುವುದರ ಜೊತೆಗೆ ತಲತಲಾಂತರದ ಚೌಕಟ್ಟನ್ನು ಒಡೆಯುವ ಬಗೆ ಇದೆಂದು ಗಮನಿಸಿದಾಗ ಇವುಗಳ ಸ್ಥಾನ ದೊಡ್ಡದೆನಿಸುತ್ತದೆ. ಆದರವರ ಭಾವಕ್ಕೆ ಕಾವ್ಯ ಸಿಕ್ಕಿ ನೂರು ರೂಪಗಳಲ್ಲಿ ಕಾಣುವ ವೈವಿಧ್ಯತೆಯನ್ನು ಸಾಧಿಸುತ್ತಿದ್ದ ಈ ಬಗೆಯ ರಚನೆಗಳು 'ಆಧುನಿಕತೆ'ಯ ಜೊತೆ ಜೊತೆಯಲ್ಲೇ ಶಿಷ್ಟ ಕಾವ್ಯದಲ್ಲೇಕೆ ನಿಂತು ಹೋದವು? ಎಂಬುದೇ ವಿಚಿತ್ರ. ಈ ಪ್ರಶ್ನೆಯನ್ನು ಹಲವು ನೆಲೆಗಳಲ್ಲಿ ಕೇಳಿಕೊಳ್ಳುವ ಅಗತ್ಯ ಇದೆ.

## ಅಧ್ಯಾಯ-೪

### ಇಲ್ಲಿ ನಮ್ಮ ಲಾಭ, ನಷ್ಟ . . . .

ಕ್ರಿ.ಶ. ೧೮೮೮ ರಲ್ಲಿ ಪ್ರೊಟೆಸ್ಟಂಟ್ ಮಿಶನರಿಗಳ ಮುಂದೆ ಮಂಡಿಸಿದ ಪ್ರಗತಿಪರ ವಿಚಾರಗಳು ಹೀಗಿದ್ದವು. ''ದೇಶೀಯರಲ್ಲಿ ಜಿಜ್ಞಾಸಾಭಾವ ಬೆಳೆಯುತ್ತಲಿದೆ. ಅದನ್ನ ತಣಿಸುವಂತಹ ಪುಸ್ತಕಗಳನ್ನು ಹೊರಡಿಸಬೇಕು. ಈ ದಿಶೆಯಲ್ಲಿ ದೇಶೀಯ ಮತ ಪ್ರಚಾರಕರು ಹೆಚ್ಚು ಸಮಂಜಸವಾದ ಸಾಹಿತ್ಯವನ್ನು ರಚಿಸಬಲ್ಲರಾದ್ದರಿಂದ ಅವರಿಗೆ ವಿಶೇಷ ಅವಕಾಶವನ್ನು ಕಲ್ಪಿಸಿಕೊಡಬೇಕು. ಹಿಂದೂ ಧರ್ಮದೊಂದಿಗೆ ಹೋಲಿಸಿ ಕ್ರೈಸ್ತ ತತ್ವಗಳನ್ನು ಪ್ರಕಾಶಿಸಬೇಕು. ಮಹಿಳೆಯರಿಗೆಂದೇ ಪ್ರತ್ಯೇಕವಾಗಿ ಸಾಹಿತ್ಯ ರಚನೆಯಾಗಬೇಕು. ಒಂದು ದೇಶ ಭಾಷೆಯಿಂದ ಇನ್ನೊಂದಕ್ಕೆ ಉತ್ತಮ ಕೃತಿಗಳ ಭಾಷಾಂತರ ಕಾರ್ಯ ವ್ಯವಸ್ಥಿತವಾಗಿ ನಡೆಯಬೇಕು. ಹಾಡುಗಳು ದೇಶೀಯರ ನೆಚ್ಚಿನ ಸಾಹಿತ್ಯ ಪ್ರಕಾರವಾಗಿದ್ದು, ನಾವು ಅವುಗಳ ಮೂಲಕ ಮತತತ್ವಗಳನ್ನು ಹರಡಬೇಕು. ಅಲ್ಲದೆ ಕ್ರೈಸ್ತ ತತ್ವ ಪ್ರಸಾರದ ದೃಷ್ಟಿಯಿಂದ ಪತ್ರಿಕೆಯೊಂದನ್ನು ಹೊರಡಿಸುವ ಅಗತ್ಯವೂ ಇದೆ'' [1]

ಬ್ರಿಟಿಷ್ ಆಡಳಿತವು ಅಕ್ಷರಕ್ಕೆ ಒತ್ತುಕೊಟ್ಟು, ಶಿಕ್ಷಣಕ್ಕೆ ಮಹತ್ವ ನೀಡಿದ್ದು ಒಂದು ರೀತಿಯ 'ಕ್ರಾಂತಿ'ಯಾಯ್ತು. ಇಂಗ್ಲೀಷ್ ಕಲಿಕೆಯನ್ನು ಆರಂಭಿಸಿದ್ದು. ಕನ್ನಡ ಇಂಗ್ಲೀಷ್ ಶಬ್ದಕೋಶ ತಯಾರಿಸಿದ್ದು, ವ್ಯಾಕರಣ ರಚಿಸಿದ್ದು, ಸಮಾಜದ ಒಂದು ಮಗ್ಗುಲಿನ ಬೆಳವಣಿಗೆ ಸೂಚಿಸಿದರ

ಮತ್ತೊಂದು ಕಥೆ ಕಳವಳಕಾರಿಯಾಯ್ತು. ಅಕ್ಷರ ಕಾವ್ಯ ಈಗಾಗಲೇ ದೇಶೀಯ ಮೌಖಿಕ ಕಾವ್ಯಕ್ಕಿಂತ 'ಹೆಚ್ಚೆಂಬ' ಮೌಲ್ಯವನ್ನು ಕಂಡಿರುವಾಗ, ಬ್ರಿಟಿಶ್ ಹಸ್ತವೂ ಅದಕ್ಕೆ ಕೈ ನೀಡಿ ಅದೇ ಮಾದರಿಯಲ್ಲಿ ರಚಿಸುವ ಮತ್ತು ಹಾಡುವ ಅವಕಾಶ ತಂದು ಕೊಂಡದ್ದು. ಹಲವು ಜಾನಪದ ವಿಶೇಷಗಳಿಗೆ ದೊಡ್ಡ ಅಡ್ಡಿಯಾಯ್ತು. ಹಾಗೆಂದು ಜಾನಪದವನ್ನೇ ನಿರ್ಲಕ್ಷಿಸಿದರು ಎಂದು ವಾದಿಸುವುದಕ್ಕೂ ಆಗದು. ಇಲ್ಲಿ ಇವರು ಜನಪದ ಹಾಡುಗಳನ್ನು ಸಂಗ್ರಹಿಸಿ ಅದನ್ನು ಬರಹದ/ಅಕ್ಷರ ಪ್ರವಾಹಕ್ಕೆ ತಂದರೇ ವಿನಾ, ಸ್ವತಃ ತಮ್ಮ ಕ್ರೈಸ್ತ ಗೀತೆಗಳ ರಚನೆಗೆ ಅವರು ಬಳಸಿಕೊಳ್ಳಲಿಲ್ಲ. ಅವರು ಬಳಸಿಕೊಂಡದ್ದು ಪ್ರಾಸ ಪ್ರಧಾನವಾದ ಅಕ್ಷರದ ಹಾಡುಗಳನ್ನು, ಕೀರ್ತನೆಗಳ ರೂಪಗಳನ್ನು. ಯಾಕೆ ಹೀಗೆ ಮಾಡಿದರು ಎಂಬುದರ ವಿವೇಚನೆ ಆವಶ್ಯವಾಗಿದೆ. ಅಕ್ಷರ ರಚನೆಗಳು, ಬಹುತೇಕ ಬ್ರಿಟಿಶ್ ಆರ್ಥಿಕ ವ್ಯವಸ್ಥೆಯ ಅಡಿಯಲ್ಲೇ ಹುಟ್ಟಿ ಇದ್ದಂಥವು. ಇಂಥ ಹೊತ್ತಿನಲ್ಲಿ ಮೌಖಿಕ ರಚನೆಗಳು ಈ ಬಗೆಯ ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಗಳ ವಿರುದ್ಧ ಮಾತಾಡಲು ಮತ್ತು ತಮ್ಮ ದಿಗ್ಭ್ರಮೆಯನ್ನು ಸಮುದಾಯಕ್ಕೆ ಮತ್ತೆ ಮತ್ತೆ ತಿಳಿಸಲು ಯತ್ನಿಸಿರುವುದನ್ನು ಕಾಣುತ್ತೇವೆ. ಎಂತಲೇ ಜನಪದ ರಚನೆಗಳು ಸಮುದಾಯಗಳ ಒಳಗೆ ಜನಪ್ರಿಯತೆಯನ್ನು ಪಡೆದಿದ್ದರೂ ಈ ಪ್ರಕಾರವನ್ನು ತಮ್ಮ ರಚನೆಗಳಿಗೆ ಮಿಶನರಿಗಳು ಹಾಗೇ ಸ್ವೀಕರಿಸಲಿಲ್ಲ ಅನಿಸುತ್ತದೆ.

ಯಾವಾಗ 'ಮಹತು' ಪರಂಪರೆಯೊಳಗೆ ನಮ್ಮ ಅಕ್ಷರ ಕಾವ್ಯ ಸೇರಿತೋ, ಆಗಿನಿಂದ ಅಲ್ಲಿನ ಮೌಲ್ಯಗಳ ಅನುಬಂಧಗಳಾಗಿ ಈ ಹಲವು ಜಾನಪದ ಸಂಸ್ಕೃತಿಗಳು ಪರಿಗಣಿಸಲ್ಪಡ ತೊಡಗಿದವು. ಸಮುದಾಯಗಳು ತಮ್ಮ ಸಂಸ್ಕೃತಿಗಳ ಒಳಗೆ ಜೀವಂತವಾಗಿರಿಸಿಕೊಂಡಿದ್ದ ಮೌಲ್ಯಗಳು ಬದಲಾಗತೊಡಗಿದವು. ಉದಾಹರಣೆಗೆ, ಬುಡಕಟ್ಟು ಜೀವನಸ್ಪರ್ಶವುಳ್ಳ ಹಾಡುಗಳೊಳಗೆ ಇದ್ದ ಜುಂಜಪ್ಪ, ಈ ಬಗೆಯ ಮಹತೀಕರಣದ ನಂತರ ಕೃಷ್ಣನ ಅವತಾರವೆಂದು ಪರಿಗಣಿತನಾದನು.

~~ಈ ಕಾ~~ ಸಮಕಾಲೀನರಲ್ಲಿ ಚಲಾವಣೆಯಲ್ಲಿದ್ದ 'ಜೈಮಿನಿ ಭಾರತ', 'ತೊರವೆ ರಾಮಾಯಣ,' 'ಕುಮಾರವ್ಯಾಸ ಭಾರತ', ಕೆಲ ಕಥಾ ಸಂಗ್ರಹ, ಕೀರ್ತನೆ, ಪುರಾಣ ಇತ್ಯಾದಿಗಳನ್ನು ಮಿಶನರಿಗಳು ಅಚ್ಚು ಹಾಕಿಸಿದ ಉದ್ದೇಶ, ಇವಕ್ಕೆ ಮನಸೋತು ಅಲ್ಲ. ಅವರ ಉದ್ದೇಶ. ಆ ಮೂಲಕ

ಶೀಲವಾಗಿಯೂ ಇರುತ್ತಿದ್ದರು. ಮಿಶನರಿ ಬೇರೆ ರೀತಿಯಲ್ಲಿಯೂ ಕಾವ್ಯವನ್ನು ರಚಿಸುವ ಪ್ರಣಾಳಿಕೆಯನ್ನು ಇಲ್ಲಿ ಅತ್ಯಂತನಿಷ್ಠೆಯಿಂದ ಅನುಷ್ಠಾನಕ್ಕೆ ತಂದುಕೊಂಡರು. ವಿದೇಶಿ ಮಿಶನರಿಗಳ ಅನುವಾದ ಮತ್ತು ಸ್ವತಂತ್ರ ಗೀತಗಳ ಒಳಗೊಂಡ ಲಭ್ಯ ಆಕರಗಳು ಹೀಗಿವೆ.

೧) ಕ್ರೈಸ್ತ ಗೀತೆಗಳು (೧೯೪೫) : ೬೮ ಗೀತೆಗಳ ಸಂಗ್ರಹ ಬಹುಶಃ ಕ್ರೈಸ್ತ ಗೀತ ಸಂಕಲನಗಳಲ್ಲಿ ಇದೇ ಮೊದಲಿನದು. ಕಾಲಕಾಲಕ್ಕೆ ಮರು ಮುದ್ರಣಗೊಂಡ ಇದು ೧೮೮೫ರ ೭ನೇ ಆವೃತ್ತಿಯಲ್ಲಿ ಎರಡು ಭಾಗಗಳಾಗಿದ್ದು, ಈ ಮೊದಲು ಸಂಗ್ರಹಿಸಲ್ಪಟ್ಟ ೧೬೮ ಗೀತೆಗಳನ್ನ ಪ್ರಥಮ ಭಾಗದಲ್ಲಿ ಹೊಸದಾಗಿ ಸಂಗ್ರಹಿಸಲ್ಪಟ್ಟ ೧೦೨ ಗೀತೆಗಳನ್ನು ಎರಡನೆಯ ಭಾಗದಲ್ಲಿ ಸೇರಿಸಲಾಗಿದೆ. ಅಂದರೆ ಒಟ್ಟಿಗೆ ೨೭೦ ಗೀತೆಗಳನ್ನು ಈ ಆವೃತ್ತಿಯಲ್ಲಿ ಕಾಣಬಹುದಾಗಿದೆ. ಇದೇ ಸಂಕಲನ ೧೯೧೩ರ ಹೊತ್ತಿಗೆ ೨೨ ಮುದ್ರಣ ಕಂಡು ತನ್ನ ಆವೃತ್ತಿಯಲ್ಲಿ ೧೪೦ ಹೊಸಗೀತೆಗಳನ್ನು, ಕೆಲವು ದಕ್ಷಿಣ ಕನ್ನಡ ಜಿಲ್ಲೆ ಮತ್ತು ಉತ್ತರ ಕರ್ನಾಟಕದ ಮಾದರಿಗಳನ್ನು ಇವು ಹೊಂದಿವೆ.

೨) ಯಾತ್ರಿಕನ ಸಂಚಾರ (೧೮೪೭): ಇದು ಜಾನ್ ಬನಿಯನನ 'THE PILIMGRIM'S PROGRESS' ಎಂಬ ಜನಪ್ರಿಯ ಗದ್ಯಕೃತಿಯ ಅನುವಾದ.

೩) ಅರುಣೋದಯ ಪತ್ರಿಕೆ (೧೮೬೧) : ಬಿ.ಹೆಚ್. ರೈಸ್ ನಡೆಸುತ್ತಿದ್ದ ಈ ಪತ್ರಿಕೆ ಅನೇಕ ಭಾಷಾಂತರಿತ, ಸ್ವತಂತ್ರ ಬಿಡಿಹಾಡುಗಳು ಪ್ರಕಟವಾಗಿವೆ.

೪) ಕಥಾಮಾಲೆ (೧೮೬೨) : ಇದು ರೆವರೆಂಡ್ ಫರ್ಡಿನಾಂಡ್ ಕಿಟಲ್ ಅವರ ಸ್ವತಂತ್ರ ಪದ್ಯ ಕೃತಿ. ಇಲ್ಲಿ ವಾರ್ಧಕ, ಭಾಮಿನಿ ಷಟ್ಪದಿಗಳ ಜೊತೆ ತಾಳ ಮತ್ತು ಸಂಗೀತ ಕೇಂದ್ರಿತ ರಚನೆಗಳೂ ಇವೆ.

೫) ಪ್ರಾಕ್ಕಾವ್ಯ ಮಾಲಿಕೆ (೧೮೬೮) : ಡಬ್ಲ್ಯು. ಜಿ. ವುರ್ತ್ ಅವರ ಪದ್ಯ ಸಂಕಲನ ಇದು ಶಾಲಾ ವಿದ್ಯಾರ್ಥಿಗಳ ಪಠ್ಯಪುಸ್ತಕ. ಇಲ್ಲಿಯೂ ಪದ್ಯಗಳನ್ನು ಪೌರಾಣಿಕ, ಜೈನ, ಬ್ರಾಹ್ಮಣ ಸಾಹಿತ್ಯವೆಂಬ ವರ್ಗಗಳಲ್ಲಿ ವಿಂಗಡಿಸಿ, ಹೊಸಗ ರೀತಿ ಕ್ರೈಸ್ತ ಪದಗಳು ಎಂಬ ಹೆಸರಿನ ಗೀತಗಳನ್ನು ಜೋಡಿಸಿದ್ದಾರೆ.

೬) ಕನ್ನಡ ಸಂಗೀತಗಳು (೧೮೯೮): ಕ್ರೈಸ್ತ ಗೀತಗಳಿಗೆ ಸಂಬಂಧ ಪಟ್ಟ ಎರಡನೆ ಪುಸ್ತಕ.

೭) ಬಾಲಕರ ಗೀತಗಳು (೧೯೦೪) : ಇದು ಮಂಗಳೂರು ಬಾಸೆಲ್ ಮಿಶನ ಟ್ರ್ಯಾಕ್ಟ್ ಬುಕ್ ಡಿಪೋದವರು ಪ್ರಕಟಿಸಿದ ೧೨೩ ಗೀತಗಳ ಅನುವಾದ ಕೃತಿ.

ಕ್ರೈಸ್ತ ಗೀತಸಾಹಿತ್ಯದ ಸ್ವರೂಪ : ಧರ್ಮ ಪ್ರಸಾರ ಉದ್ದೇಶವನ್ನು ಗಮನದಲ್ಲಿಟ್ಟುಕೊಂಡ ಮಿಶನರಿಗಳು ಸಾಹಿತ್ಯದ ವಸ್ತುವಿನ ಬಗೆಗೆ ಹೆಚ್ಚು ತಲೆಕೆಡಿಸಿಕೊಳ್ಳಲಿಲ್ಲವೆಂದು ತೋರುತ್ತದೆ. ಅಂತೆಯೇ ಅವರು ಕ್ರೈಸ್ತ ಧರ್ಮಕ್ಕೆ ಸಂಬಂಧಿಸಿದ ವಸ್ತುವನ್ನೇ ಸಾಮಾನ್ಯವಾಗಿ ಅವಲಂಬಿಸಿದರು. ಕ್ರೈಸ್ತ ಗೀತಾ ಸಾಹಿತ್ಯ ಕಥಾತ್ಮಕ ಮತ್ತು ಅಕಥಾತ್ಮಕ ಹೀಗೆ ಎರಡು ಬಗೆಯ ವಸ್ತುವನ್ನವಲಂಬಿಸಿದೆ. ಈ ಗೀತೆಗಳನ್ನು ಪ್ರೌಢರ ಗೀತಗಳು ಮತ್ತು ಬಾಲಕರ ಗೀತಗಳೆಂದು ಪ್ರತ್ಯೇಕಿಸಿದರೆ, ಪ್ರೌಢರ ಗೀತಗಳಲ್ಲಿ ಅಕಥಾತ್ಮಕವಾಗಿದೆ. ಇಲ್ಲಿ ಪ್ರಾರ್ಥನೆ, ಆತ್ಮ-ಶುದ್ಧಿ, ಸಾಮಾಜಿಕ, ಕ್ರೈಸ್ತ ಆಚರಣೆ ಎಂಬ ಕವಲುಗಳು ಕಾಣಸಿಗುತ್ತವೆ. ಅದೇ ರೀತಿ ಬಾಲಕರ ಗೀತಗಳಲ್ಲಿ ಭಕ್ತಿ ವಾಣಿ ಮತ್ತು ಪ್ರಾರ್ಥನೆಗಳೆಂಬ ಕವಲುಗಳಿವೆ.

ಯೇಸು ಕುರಿತ ಗೀತೆಗಳು 'ಆಧುನಿಕ' ಕಾವ್ಯಕ್ಕೆ ಮೊದಲಿಗೆ ಸರಳ ಭಾಷೆ ರೂಪಕೊಟ್ಟವಾಗಿವೆ. ಹಾಗಾಗಿ ಸರಳ ಭಾಷಾ ಬಳಕೆಯು ಈ ಬಗೆಯೇ ಮುಂದೆ ಖಚಿತ ಮಾರ್ಗಕ್ಕೆ ಸಹಾಯವಾದಂತಿದೆ.

ಉದಾಹರಣೆ: ೧. ಪ್ರೀತಿ, ದಿವ್ಯರೂಪವಾಗಿ
ನನ್ನ ಸೀಮೆ ಹಿಡಿದೆ,
ಪ್ರೀತಿ, ಪೂರ್ಣ ಕೃಪೆಯಾಗಿ
ಬಿದ್ದ ನನ್ನನೆತ್ತಿದಿ ।
ಪ್ರೀತಿ, ಸರ್ವಕಾಲಕ
ದಾಸನಾದೆ ನಿನಗೆ ।॥ ೧ ॥

(ಪುಟ ೧೫ ಕನ್ನಡ ಗೀತಗಳು)

ಉದಾಹರಣೆ: ೨. ಓ ದಿವ್ಯ ಆತ್ಮ । ಇಳಿದು

ನಮ್ಮಲ್ಲಿ ಈಗ ಬಾ;

ಎಲ್ಲರ ಅಂತರಂಗಕ್ಕೂ

ಸು... ವರ' ತಾ.

(ಪುಟ ೧೧೮ ಕನ್ನಡ ಸಂಗೀತಗಳು)

ಉದಾಹರಣೆ :೩. ಈ ಮಂದಿ ನಿನ್ನ ಮಾತಿಗೆ

ವಿಶ್ವಾಸ ದಿಂದ ಒಪ್ಪಿದ್ದಾರೆ,

ಸಜ್ಜೀವವನ್ನು ಬಯಸ್ತಾರೆ,

ಸ್ವೀಕಾರ ಮಾಡು ಕರ್ತನೆ। ॥೧॥

(ಪುಟ ೧೬೭ ಕನ್ನಡ ಗೀತಗಳು)

'ಆಧುನಿಕ' ಕಾವ್ಯದ ಹಿನ್ನೆಲೆಯಲ್ಲಿ ಇಲ್ಲಿಯ ಪ್ರಕೃತಿ ಗೀತೆಗಳು ಅತಿ ಮುಖ್ಯವಾದವು. ಯೇಸುವನ್ನು ಬಿಟ್ಟು ಪ್ರಕೃತಿ ಕುರಿತ ಈ ಗೀತಗಳಲ್ಲಿ ಲಯುಗಾರಿಕೆಗೆ ಒತ್ತು ನೀಡಲಾಗಿದೆ. ಇವುಗಳ ಮೇಲೆ ಪರಂಪರಾಗತ ಸಾಹಿತ್ಯದ ಪ್ರಭಾವವೂ ಇದೆ.

ಉದಾಹರಣೆ: ೧. ಹಕ್ಕಿ ಪಕ್ಕಿ ಬಂದವು

ತಂದವು ವಿಲಾಸ।

ಕೇಳು ವಂತೆ ಆಡುತ್ತ

ನಲಿ ನಲಿ ಹಾಡುತ್ತ,

ಬಂದು ಚೈತ್ರಮಾಸ। ॥೧॥

(ಪುಟ ೧೨ ಬಾಲಕರ ಗೀತಗಳು)

ಹೀಗೆ ಹೊರಟ ಗೀತಗಳು ಮುಂಜಾನೆ, ಸಂಜೆ, ಬೇಸಿಗೆ ಕಾಲ, ಮಳೆಗಾಲ, ಸೂರ್ಯೋದಯ, ಗಿರಿ, ವನಗಳ ವಿವಿಧ ರೀತಿಯ ವರ್ಣನೆಗಳು ಬಾಲಕರ ಗೀತಗಳಲ್ಲಿ ಮೈದೋರಿವೆ. ಕ್ರೈಸ್ತಗೀತಗಳ ಈ ಬಗೆಯ ಸರಳ ಭಾಷಾಕ್ರಮ. ಸೇರ ನಿರೂಪಣೆಗಳು 'ಆಧುನಿಕ' ಕನ್ನಡ ಕಾವ್ಯ ಹುಟ್ಟಿಗೆ ಮಹತ್ವ ಪೂರ್ಣ ಪ್ರೇರಕವಾಗಿವೆ.

ಕ್ರೈಸ್ತ ಗೀತಗಳಿಗೆ ಕೇವಲ ಪಾರಂಪರಿಕ ಅಕ್ಷರ ಸಾಹಿತ್ಯವೇ ಪ್ರೇರಕವಲ್ಲ. ಜಾನಪದ ಪ್ರಭಾವವೂ ಇದೆ.

ಉದಾಹರಣೆ: ಆಕಾಶ ವಾಸ ಮಾಡುವ

ನಮ್ಮ ಪ್ಪ ತಂದೆಯೇ ।

ಎಲ್ಲರು ನಿನ್ನ ನಾಮವ

ಪವಿತ್ರ ಮಾಡಲಿ ॥ ೧ ॥

(ಪುಟ ೨೪ ಕನ್ನಡ ಸಂಗೀತಗಳು)

ಕ್ರೈಸ್ತಗೀತಗಳು ಮುಂದಿನ 'ಆಧುನಿಕ' ಸಂಕ್ರಮಣ ಕಾಲದ ಕವಿಗಳಾದ ಪಂಜೆ, ಪೈ, ಹಟ್ಟಿಯಂಗಡಿ, ಎಸ್.ಜಿ.ನ. ಹೀಗೆ ಮೊದಲಾದವರಿಗೆ ಮಾರ್ಗದರ್ಶಿ ಯಾಗಬಲ್ಲ ರಚನೆ ನೀಡಿದ್ದಾರೆ.

ಯೇಸು ಕ್ರಿಸ್ತ ।

ಮುಕ್ತಿ ನಾಥಾ

ನಿತ್ಯ ಜೀವ ಪ್ರಭುವೆ ॥

ನಿನ್ನ ಕೃಪೆ

ನಮ್ಮ ರಕ್ಷೆ

ಕಾಯು, ಕಾಯು ನಮ್ಮನ್ನು ॥ ೧ ॥

(ಪುಟ ೪೦ ಕನ್ನಡ ಸಂಗೀತ ಗೀತಗಳು)

ಮುಂದಿನ ಆಧುನಿಕ ಕಥನ ಕವನಗಳಿಗೂ ಇವು ಮಾದರಿಯಾಗಿವೆ. ಆ ವೈವಿಧ್ಯ ಪೂರ್ಣ ಛಂದೋ ಲಯಗಳ ಪ್ರಯೋಗಕ್ಕೆ ಈ ಮಿಶನರಿಗಳೇ ಮೂಲ ರೂಪಗಳಾಗಿವೆ.

ಉದಾಹರಣೆ : ಕಳ್ಳರ ಕೈಯಲಿ ಬಿದ್ದಿಯೊ ಹಣವನು

ಕೊಳ್ಳೆಯು ಕೊಟ್ಟಿಯೊ ಪರದೇಶಿ

ಒಳ್ಳೆಯ ನಂಬಿಗೆಯುದ್ದರೆ ಸಾವಿರ

ಕಳ್ಳರ ಸಾದರು ಗೆಲಬಹುದು

ಹೊಸ ಒಡಂಬಡಿಕೆಯ ಮತ್ತಾಯನ ಸುವಾರ್ತೆಯನ್ನು ವಿಶೇಷವಾಗಿ ಆಧರಿಸಿ ಯೇಸುವಿನ ಜೀವನ ಘಟನೆಗಳೊಂದಿಗೆ ಸಾಮತಿ (ಕಥೆ)ಗಳನ್ನು ಬರೆಸಿದ್ದಾರೆ. ಈ ಕೃತಿಯಲ್ಲಿ ಬರುವ ಪೂರ್ವೀರಾಗ ಮಟ್ಟು ತಾಳದ 'ಹತ್ತು ಮಂದಿ ಕನ್ಯೆಯರ ಸಾಮ್ಯವು' ಎಂಬ ಕಥೆಯನ್ನು ಇಲ್ಲಿ ಉದಾಹರಣೆಯಾಗಿ ನೋಡಬಹುದು.

ಸರಸಿ, ಈಗ ಬಂತು ಕತೆಯ ದಿವಸ ॥ ಪ ॥
ಅವನ ಕೀರ್ತಿಸುವಲ್ಲಿ
ಭುವನ ದೊಡೆಯ ನೆನಿಸುವಾತ ॥
ನವನಿಯಲ್ಲಿ ಬದುಕಲೆಂದು
ತವಕ ಹೋಗಿ ಬರುವ ನಂತ ॥ ೧ ॥

ಹೋದನವನು ಮೇಲ ಲೋಕ -
ಕ್ಕೆದುವರಕೆ ದಿವ್ಯ ಮಹಿಮೆ ॥
ಯಾದರಿನ್ನು ಮುಂದೆ ಬಹನು
ವಾದಿಸಲ್ಕೆ ನ್ಯಾಯ ತೀರ್ಪೆ ॥ ೨ ॥

ಮೋಡಗವಿದ ಬಾನಿನಲ್ಲಿ
ಮೂಡಲಿಂದ ಪಡುಲ ತನಕ - ॥
ಓಡಿ ಹೋಗುವಂತೆ ಮಿಂಚು
ನೋಡಿರಾತನಂದು ಬಹನು. ॥ ೩ ॥

(ಪುಟ ೨೧ ಕಥಾವಳಿ)

ಇನ್ನು ಬಾಸೆಲ್ ಮಿಶನ್ ಸಂಗ್ರಹಿಸಿದ 'ಸ್ತೋತ್ರಗೀತೆಗಳ ಸಂಗ್ರಹ'ವು ಅಂದು ಪ್ರಾಸದಿಂದ ಪದ್ಯದ ಪಾಠವಾಗುತ್ತದೆ. ಅಂದ ಕೆಡುತ್ತದೆ ಎಂದೆಲ್ಲಾ ಹೇಳುತ್ತಿದ್ದ ಹೇಳಿಕೆಗಳಿಗೆ ಉದಾಹರಣೆಗೆ ಕೊಡುವಂತಿದೆ.

ಉದಾಹರಣೆ: ಇಲ್ಲಿ ನಮ್ಮ ಸುಖ ಕಷ್ಟ

ಇಲ್ಲಿ ನಮ್ಮ ಲಾಭ ನಷ್ಟ

ನಮ್ಮ ಕ್ಷೇಮ ತಾನಪ್ಪ

ನಮ್ಮ ನೀತಿ ಪಾಪಪ್ಪ

ಕೆಲವು ಪದ್ಯಗಳಂತೂ ಸಂಭಾಷಣೆಗಳನ್ನೇ ಬಲವಂತವಾಗಿ ಪ್ರಾಸಕ್ಕೆ ಹೊಂದಿಸಿ ಅವನ್ನೇ ಬಿಡಿ ಬಿಡಿಸಿ ಪದ್ಯಗಳನ್ನಾಗಿ ಜೋಡಿಸಿರುವಂತಿದೆ.

ಉದಾಹರಣೆ : ಅದುವೆ ನಿಷ್ಕಳಂಕ ದೇಶ

ಅಲ್ಲಿ ನಮಗೇ ಪ್ರವೇಶ

ಅಲ್ಲಿ ನಾವು ಸೇರೋದು

ನಿತ್ಯ ಕ್ಷೇಮ ಸಿಕ್ಕೋದು

ಒಟ್ಟಾರೆ ಇಲ್ಲಿನ ಅನುವಾದಗಳು ಕನ್ನಡಕ್ಕೆ ಹೊಸತನವನ್ನು ಕೊಡಬೇಕೆಂಬ ದೃಷ್ಟಿಯಿಂದ ಹೊರಟಿಲ್ಲ; ಬದಲಿಗೆ ಆಗಾಗಲೇ ಇದ್ದ ಲಯ ಪ್ರಾಸಗಳ ಜೊತೆ ಬೆರೆತು ನಮ್ಮ ಅಧ್ಯಾತ್ಮ ಈಡೇರಿಸಿಕೊಳ್ಳಬೇಕೆನ್ನುವವು. ಈ ನಡುವೆ ಇವರೇ ಕನ್ನಡ ಕಾವ್ಯಕ್ಕೇ ಅಳವಡಿಸಿದ ಪಾಶ್ಚಾತ್ಯ ಸಂಗೀತ ಮಟ್ಟುಗಳೂ ಕೂಡ ಕೇವಲ ಅಳವಡಿಕೆಗಳಾದವೇ ಹೊರತು ಆಧುನಿಕ ಕಾವ್ಯಕ್ಕೆ ಹೊಸ ಮಾರ್ಗಗಳಾಗಲಿಲ್ಲ, ಪ್ರೇರಣೆಗಳಾದವು.

ಹೀಗೆ ಒಂದು ಅನ್ಯ ಸಂಸ್ಕೃತಿಯ ಪ್ರಭಾವಕ್ಕೊಳಗಾದ ಕಾವ್ಯ ಹೆಚ್ಚು ತೀಕ್ಷ್ಣವಾಗಿ ತನ್ನ ಸ್ವಂತಿಕೆಯನ್ನು ಶೋಧಿಸಲು ಪ್ರಯತ್ನಿಸತೊಡಗಿತು. ಇಂಥ ಕ್ರಿಯೆ-ಪ್ರತಿಕ್ರಿಯೆಗಳನ್ನು ನಾವು ಅನಂತರದ ಕಾವ್ಯಗಳಲ್ಲಿ ಗುರುತಿಸಬಹುದು. ನಮ್ಮ ಕಾವ್ಯ ಇಂಗ್ಲೀಷ್ ಭಾಷೆ, ಇಂಗ್ಲೀಷ್ ಸಾಹಿತ್ಯ, ಇಂಗ್ಲೀಷ್ ಸಂಸ್ಕೃತಿಗಳಿಂದ ಪ್ರಭಾವ ಪಡೆದದ್ದು ನಿಜವಾದರೂ ಆ ಪ್ರಭಾವ ನಮ್ಮ ಕಾವ್ಯದ ಮೇಲೆ ಯಾಂತ್ರಿಕವಾಗಿ ಕೆಲಸ ಮಾಡಿಲ್ಲ. ಅದಕ್ಕೆ ಸತತವಾಗಿ ಪ್ರತಿಕ್ರಿಯಿಸುತ್ತಲೇ ಅದು ತನ್ನ ಸ್ವಂತಿಕೆಯನ್ನು ರೂಪಿಸಿಕೊಳ್ಳುತ್ತ ಬಂದಿದೆ. ಈ ನೆಲೆಯಲ್ಲಿ ಅದು ಪ್ರೇರಕವೂ ಆಗಿದೆ. ಇದಕ್ಕೆ ಕಾರಣ ಅವರ ಕೆಲವೇ ಶಬ್ದಗಳ ಸಣ್ಣ ವಾಕ್ಯಗಳು, ಸಮಗ್ರ ಭಾವಭಾವನೆ; ಸರಳವಾದ ನಿರೂಪಣೆ, ಇದರಾಚೆ ಗೀತದ ಗೇಯಗುಣ ಮತ್ತು ಭಾವಗೀತಾತ್ಮಕತೆ.

ಪಾರಮಾರ್ಥಿಕ ವಿಷಯಗಳಿಗಿಂತ ರಾಷ್ಟ್ರಿಕ, ಸಾಮಾಜಿಕ, ಚಾರಿತ್ರಿಕ ಮುಂತಾದ ವಾಸ್ತವಗಳಿಗೆ ಕಣ್ಣಾದರು. ಜೊತೆಗೆ ಈಗಾಗಲೇ ನೋಡಿದಂತೆ ತತ್ವ ಪದಕಾರರು ರೂಪಿಸಿದ ಬಹು ಭಾಷಾ ಮಿಶ್ರಣ ಕಾವ್ಯ ಇಲ್ಲೂ ಕೂಡ ವ್ಯಂಗ್ಯದ ಅಸ್ತ್ರವಾಗಿ ಮುಂದುವರೆದಿದೆ.

ತೋಂಡಿ ಸಂಪ್ರದಾಯದಂತೆ 'ಆಧುನಿಕ' ಕನ್ನಡ ಕಾವ್ಯವೂ ಷಟ್ಪದಿ, ಕಂದ, ರಗಳೆ, ತ್ರಿಪದಿ ಮೊದಲಾದ ರೂಪಗಳ ಮೂಲಕ ಒಂದು ರೀತಿಯ ಆಧುನಿಕತೆಯನ್ನ ತೋರಿದರೆ. ಮತ್ತೊಂದು ನೆಲೆಯಲ್ಲಿ ಮಕ್ಕಳಿಗಾಗಿ ಹಾಡುವ ಆಡು ಭಾಷಾ ಬಳಕೆ 'ಆಧುನಿಕ' ಕನ್ನಡ ಕಾವ್ಯಕ್ಕೇ ಮಾರ್ಗವಾಯಿತು.

ಕಾವ್ಯ ಹೇಗೆ ಆಧುನಿಕವಾಗುವುದಕ್ಕೆ ಪರಂಪರೆ ಕಾರಣವಾಯ್ತೋ ಅಥವಾ ವಿದೇಶೀ ಅಸ್ತ್ರವೇ ಆ ಮಾರ್ಪಾಡನ್ನ ತಂದಿತೋ ಗೊತ್ತಿಲ್ಲ. ಒಟ್ಟಿನಲ್ಲಿ ಅನುವಾದ ಕಥನ ಕಾವ್ಯಗಳು ನಮ್ಮ ಕಥನಗಳೂ ಆಗಿವೆ. ಉದಾಹರಣೆಗೆ: ಪಂಜೆ, ವರ್ಡ್ಸ್‌ವರ್ತ್ ಕವಿತೆಯನ್ನ ಆಧರಿಸಿ ದಕ್ಷಿಣ ಕನ್ನಡದ ಬಿರುಮಾಸೆಟ್ಟಿಯ ಕತೆ ಮಾಡಿದ್ದು, ಇಲ್ಲಿ ಈ ಕಥೆ ದಕ್ಷಿಣ ಕನ್ನಡದ್ದೆ ಎನ್ನುವಷ್ಟು ಸ್ವತಂತ್ರವಾಗಿದೆ.

ಇಂತಹ ಸುಂದರ ಲಯಗಾರಿಕೆಯ ಮೂಲಕ ತೋಂಡಿ ಸಂಪ್ರದಾಯದಂತೆ ಕಾವ್ಯವು ಜನ ತಲುಪುವ ಹವಣಿಕೆ ಹೊಂದಿತ್ತೆ? ಉದಾಹರಣೆಗೆ ಲಯಗಾರಿಕೆಯ ಮೂಲಕ ಕವಿ ಕಾವ್ಯ ಕಟ್ಟುವ ಬಗೆ ನೋಡಿ.

೧) ಗಬ್ಬವಾಯಿತು ಅಬ್ಬೆಯಾಯಿತು ಹಬ್ಬವಾಯಿತು ಹಾಲಿನ
ಒಬ್ಬಳನು ನಾ ಮದುವೆಯಾದೆನು ಇಬ್ಬರಿದ್ದೆವು ಸುಖದಲಿ

೨) ಮುದ್ದೆಪೆತ್ತರ ನನ್ನ ಮೈಯನು
ಗುದ್ದಿ ತೆಗೆದಂತಾಯಿತು.

ಹಾಗೆ ನೋಡಿದರೆ ಈ ಕಾಲದಲ್ಲಿ ಹೊಸ ಸಾಹಿತ್ಯವನ್ನು ನಿರ್ಮಿಸಿ ಹೋದವರಿಗೆ ಹಲವು ಸಮಸ್ಯೆಗಳಿದ್ದವು. ಒಂದು ಈ ಪರಂಪರೆಗೆ ತನ್ನ ತನವನ್ನು ಕಾಯ್ದುಕೊಳ್ಳ ಬೇಕಾಗಿ ಹಂಬಲವಿತ್ತು. ಏಕೆಂದರೆ ಪಾಶ್ಚಾತ್ಯ ಸಾಹಿತ್ಯ ಸೃಷ್ಟಿಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂದರ್ಭಗಳೇ ಬೇರೆ ಕನ್ನಡ ನೆಲದ

ಕವಿತೆ ಹೀಗೆ ಪರಸಂಸ್ಕೃತಿ ಮತ್ತು ಪರಜ್ಞಾನದ ಜೊತೆ ಸಮೀಕರಣಗೊಳ್ಳುತ್ತಿರುವ ಬಗೆಯನ್ನು ಒಂದು ಕಡೆ ಹೇಳಿದರೆ ಇನ್ನೊಂದು ಕಡೆ ತನ್ನ ಒಳಗಿನ ದೇಸೀತನದ ಬದುಕಿಗೆ ಮುಖ ಮಾಡುತ್ತದೆ ಜೊತೆಗೆ ದೇಸೀ ಹಾಡುಗಳ ಮೂಲಕ ಸಂಸ್ಕೃತಿಯ ಸತ್ವವನ್ನು ಉಳಿಸಿಕೊಳ್ಳುವ ಕಾತುರವನ್ನು, ಅಗತ್ಯವನ್ನು ಮತ್ತು ಆ ಬಗೆಯ ಪ್ರೀತಿಯನ್ನ ಹೇಳುತ್ತದೆ. ಹಾಗಾಗಿ ಈ ನೆಲೆಯಲ್ಲಿ ತೋಂಡಿ ಪರಂಪರೆಗಳು ಪ್ರಭಾವಶಾಲಿಯಾಗಿವೆ. ಉದಾಹರಣೆಗೆ ಪಂಜೆಯವರ ಜೋಗುಳ ಮತ್ತು ನಡತೆ ಹಾಡುಗಳು.

ಜಲದ ಮೇಲೆ ಮಲಗುವ ಮರಿ ಹಂಸದಂತೆ
ಎಲೆಯೊಳಗಿನ ಮಲ್ಲಿಗೆಯ ಮೊಗ್ಗಿನಂತೆ
ಜೇನುತೊಟ್ಟಿಲಲಿ ಮಲಗಿರುವ ಅರಗಿಳಿಯು
ತಲೆ ದಿಂಬಿಗೀಶನ ಕೈ ನಿನ್ನ ಬಳಿಯು. 3

ಲಾವಣಿಗಳು ಇಲ್ಲಿನ ಬದುಕನ್ನು ಎತ್ತಿಕೊಂಡು ಕಥೆಮಾಡಿ ಹಾಡುವಂತೆ ಈ ಕವಿತೆಯೂ ಸಹ ತನ್ನ ಪುಟ್ಟ ಆಕೃತಿಯೊಳಗೂ ಆ ಬಗೆ ತುಂಬ ಕಥನ ಮಾಡಿದೆ. ಉದಾಹರಣೆಗೆ ಪಂಜೆಯವರು ಚಿತ್ರ ಕಟ್ಟುವ ಬಗೆ ನೋಡಿ.

ತೇರಿಮೊಂದಿಗೆ ಆರು ಬಂದಿಗೆ
ಹೇರಿ ನೆತ್ತಿಯ ಮೇಲಕೆ
ಹಾರಿ ಧಿಕ್ಕಳ ಕುಣಿದ ನಕ್ಕಳ
ನೀರು ಹೊರಗಡೆ ಚೆಲ್ಲದೆ .

ಇಲ್ಲಿಯ ಲಯಗಾರಿಕೆ ಮುಂದಿನ 'ಆಧುನಿಕ' ಕವಿಗಳ ಲಯವನ್ನು ನೆನಪಿಸದಿರದು. ಹಾಗಂತ ಈ ಬಗೆಯ ತಾಜಾತನ, ನಯ, ಮಣುಪುಗಳು ಎಲ್ಲಾ ಪದ್ಯಗಳಲ್ಲೂ ಇಲ್ಲ. ಪ್ರಾಸದಗುಂಗಿನಲ್ಲಿ ಆ ಕ್ರಿಯೆಯನ್ನು ಜಾಳಾಗಿಸಿವೆ ಎನ್ನಲು ಸಾಧ್ಯವಿದೆ ಉದಾಹರಣೆಗೆ,

## ಟಿಪ್ಪಣಿಗಳು

1. ಡಾ. ತಿ. ಕೃಷ್ಣೇಗೌಡ : ಕೆರೆಗೊಂಡಿ ಸುಬ್ಬರಾಯರ ಜೀವನ ಮತ್ತು ಕೃತಿಗಳು. ಪುಟ 153
2. ಗಿರಡ್ಡಿ ಗೋವಿಂದರಾಜ : ಸಾಹಿತ್ಯ ಮತ್ತು ಪರಂಪರೆ. ಪುಟ 14
3. ಹರಿಕೃಷ್ಣ ಭರಣ್ಯ : ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ. ಪುಟ 167

## ಅಧ್ಯಾಯ-೬



### ಅವಳ ತೊಡಿಗೆ ಇವಳಿಗಿಟ್ಟು.....

ಸಂಕ್ರಮಣ ಸ್ಥಿತಿಯಲ್ಲಿದ್ದ 'ಆಧುನಿಕ' ಕನ್ನಡ ಕವಿತೆ ಹೊಸತನಗಳ ನಿರೀಕ್ಷೆಗಳಲ್ಲಿ ಹೊರಟು ಅನೇಕ ಸಮನ್ವಯಗಳನ್ನು ಕಾಣತೊಡಗಿತು. ಅನುವಾದ, ರೂಪಾಂತರ, ಭಾವಾಂತರಗಳಲ್ಲಿ, ಭಾಷಾ ಬಳಕೆ ಶಿಥಿಲಬಂಧಗಳಲ್ಲಿ ಕಥನಾತ್ಮಕ ಮತ್ತು ವರ್ಣನಾತ್ಮಕ ವಸ್ತುಗಳ ಆಯ್ಕೆಯಲ್ಲಿ ಏಕರೂಪೀ ಭಾಷೆಯ ಮೂಲಕ ನಾದ ಮತ್ತು ಲಯ ಪ್ರಧಾನವಾಗಿಸಿಕೊಂಡಿವೆ.

ಹಟ್ಟಿಯಂಗಡಿ ನಾರಾಯಣರಾವ್, ಎಸ್.ಜಿ. ನರಸಿಂಹಾಚಾರ್ ಕಾಲದಲ್ಲಿ ಈ ಬಗೆಯ ಸೂಕ್ಷ್ಮ ರೂಪುಗಳನ್ನು ಗುರ್ತಿಸಬಹುದಾದರೂ ಈ ಬಗೆ ಇನ್ನೂ ಹೆಚ್ಚು ಖಚಿತಗೊಂಡದ್ದು ಶ್ರೀಯವರ ಕವನಗಳಲ್ಲಿ.



'ಆಧುನಿಕ' ಕನ್ನಡ ಕಾವ್ಯದಲ್ಲಿ ಮುಖ್ಯವಾಗಿ ವಸ್ತುಗಳು ಹೊಸದಾದವು. ಚಿಕ್ಕ ಚಿಕ್ಕ ಜೀವಂತಭಾವಗಳು ಪ್ರಧಾನವಾದವು, ಮಾತುಗಳು ಹಾಡಾದವು. ಇಲ್ಲೆಲ್ಲ ಪ್ರೇಮ ಕುರಿತ ಕವನಗಳು, ಪ್ರಾಣಿಮತ್ತು ಪಕ್ಷಿ ರೂಪಕ ಮಾದರಿಯ ಕವಿತೆಗಳು, ಈ ಎಲ್ಲ ಬಗೆಯ ಹೊಸತನಗಳನ್ನು ಅರಗಿಸಿಕೊಂಡಿತು. ಅಳಿದ ವಸ್ತುಗಳಲ್ಲಿ ಜಡತ್ವವಿದೆ. ಕೆಲವು ಪದ್ಯಗಳಂತೂ ಹೀಗೆ 'ಆಧುನಿಕ' ಎಂಬ ಪ್ರಶ್ನೆ ಮಾಡುವಂತಿವೆ. ಈ ದೇಶದ ಜನತೆ ಸ್ವಾತಂತ್ರ್ಯ ಮತ್ತು ಸ್ವಾಭಿಮಾನಗಳನ್ನು ಪಡೆಯುತ್ತಿದ್ದ ಆ

ಕಾಲದಲ್ಲಿ ಎಷ್ಟು ಬ್ರಿಟೀಶ್ ಪರ ಗೀತೆ ಬಂದವೋ ಅಷ್ಟೇ ಇಂಗ್ಲೀಷ್ ಗೀತೆಗಳು ಉಳಿದವಲ್ಲ. ಇಲ್ಲಿನ ಭಾವ ಇಲ್ಲಿನ ಸಂವೇದನೆಗಳಿಂದ ಸಂಪೂರ್ಣ ಕನ್ನಡ ಗೀತೆಗಳೇ ಆಗಿವೆ.

ಇಲ್ಲಿವರೆಗೂ 'ಆಧುನಿಕ' ಕನ್ನಡ ಕಾವ್ಯ ಹಲವು ಕೊಡುಕೊಳೆಗಳಲ್ಲಿ ಮುಂದುವರೆದಿದೆ. ಈಗ ಇವುಗಳ ಸೂಕ್ಷ್ಮ ಸಮನ್ವಯದತ್ತ ಹೊರಟಿದೆ. ಹಾಗಾಗಿ ಇಲ್ಲಿ ಹಳೆ ಭಾಷೆಯೊಳಗೂ ಹೊಸ ಕಾಳಜಿ ಇದೆ. ದುರಂತ ಕಾವ್ಯ ಮತ್ತು ನಾಟಕಗಳ ಹೊಸ ಅಲೆ ಶುರುವಾಗಿದೆ. ಲಾವಣಿ ಮಾದರಿ ವಸ್ತು ಆಯ್ಕೆಯಲ್ಲಿದ್ದರೂ ರೀತಿಯಲ್ಲಿ ಹೊಸ ಸುಂದರ ಕಥನಗಳಾಗಿ ಹೊಸಮಾರ್ಗವನ್ನು ಹುಟ್ಟು ಹಾಕುವಲ್ಲಿ ಸಮರ್ಥವಾಗಿವೆ.

ಒಟ್ಟಲ್ಲಿ, ಈ ಘಟ್ಟ ತನ್ನ ಅತ್ಯುತ್ತಮ ನಿರೀಕ್ಷೆಗಳ ಮೂಲಕ ಮುಂದೆ ಹಲ ಉತ್ತಮ ಕವಿಗಳನ್ನ ಬರಮಾಡಿಕೊಂಡಿತು. ಇದನ್ನ ಬೆಳೆಸಿತು ಕೂಡಾ. ಈ ವಿಷಯದಲ್ಲಿ ಎರಡು ಮಾತಿಲ್ಲ.

ಹಟ್ಟಿಯಂಗಡಿ ನಾರಾಯಣರಾವ್ (೧೮೬೩-೧೯೨೧)

---

ಧನ್ಯವಾಗಲಿ ಸಿರಿಯು ಸಿರಿವಡೆದ ಕರುನಾಡು
ಧ್ಯಾನ ಧನ ವಿಜ್ಞಾನ ಕೋಶವೆನಿಸಿ
ಕನ್ನೆಯರ, ಯುವರೆ, ಮಹಾತ್ಮ್ಯವನು ಬಯಸುತ
ಮಾನ್ಯರಾಗುವ ಜನರ ದೇಶವೆನಿಸಿ

(ಮಂಗಲ ಪದ್ಯ, ಪುಟ ೧೧೨)

ಹೊಸತನದ ಸಂಕ್ರಮಣ ಕಾಲದಲ್ಲಿ ಈ ಪದ್ಯ ಅಂದಿಗೆ ಅಗತ್ಯವಾದ ವಿಜ್ಞಾನ ಜ್ಞಾನದ ಮಹತ್ತಿಗೆ ಒಲವು ತೋರುವುದರ ಜೊತೆಗೆ ವಸ್ತು ಪರಂಪರೆ ಹಿಡಿದಿದ್ದ ರಾಜರ, ರಾಮಾಯಣ, ಮಹಾಭಾರತ, ಪುರಾಣ ಮಾರ್ಗದಿಂದ ಹೊರಬಂದು ಜನರ ಕಾವ್ಯವಾಗುವ ಆ ಮೂಲಕ ಸಾಮಾಜಿಕ, ರಾಜಕೀಯ ಮಾಧ್ಯಮವಾಗಿ ಬೆಳೆಸುವ ಆಶಯವನ್ನು ಹೊತ್ತಿದೆ. ಹಾಗಾಗಿ ಈ ಕವಿತೆ ತಲೆತಲಾಂತರದ ಜಡ ಸಂಸ್ಕೃತಿ ಮತ್ತು ಭೌದ್ಧಿಕತೆಗೆ ಚಲನಶೀಲತೆಯನ್ನು ಸೂಚಿಸುವಂತಿದೆ.

ನಾರಾಯಣ ರಾಯರ ಕವಿತೆಯನ್ನು ಗಮನಿಸುವಾಗ ಮೊದಲು ಅವರು ಮಂಗಳೂರು, ಮದ್ರಾಸ್, ಮುಂಬೈಗಳಿಗೆ ತೆರೆದುಕೊಂಡ ಮಾದರಿಯನ್ನು ಗಮನಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರದೇಶಿಕ ಸಮನ್ವಯಗಳ ಆಚೆ ಭಾಷಿಕ ಸಮನ್ವಯವೂ ಉಂಟು, ಇದು ಕುತೂಹಲಕರವಾದ ಅಧ್ಯಯನಗಳಿಗೆ ನಮ್ಮನ್ನು ಕರೆದೊಯ್ಯುತ್ತದೆ.

ನಾರಾಯಣ ರಾಯರ ಕವಿತೆಗಳ ವಸ್ತು ಕುರಿತ ಆಯ್ಕೆಯು ಮುಖ್ಯವಾಗಿ ಮೂರು ಬಗೆಯಲ್ಲಿದೆ.

1) ವ್ಯಕ್ತಿ ಕುರಿತ ಬರಹ

2) ನಿಸರ್ಗ ಕುರಿತ ರಚನೆ

3) ನೀತಿಪರ ಚಿಂತನೆ.

ಶೇಕ್ಸ್‌ಪಿಯರ್, ಕೀಟ್ಸ್, ವರ್ಡ್ಸ್‌ವರ್ತ್, ಷೆಲ್ಲಿ, ಗ್ರೇ ಮುಂತಾದ ಆಂಗ್ಲ ಕವಿಗಳ ಕವಿತೆಗಳ ಭಾಷಾಂತರ, ರೂಪಾಂತರ, ಭಾವಾಂತರಗಳನ್ನು ಮಾಡಿಕೊಳ್ಳುವಾಗ ಕನ್ನಡ ಒಲಿಕೊಳ್ಳುವ ಇಲ್ಲಿಯ ಮನಕೊಳ್ಳುವ ವಸ್ತುವಿನ ಆಯ್ಕೆಯನ್ನೇ ಮಾಡಿದ್ದಾರೆ. ಅವು ಅನುವಾದ ಎನ್ನುವುದನ್ನು ಮರೆಸಿ ಕನ್ನಡದ ಸ್ವತಂತ್ರ ಕೃತಿಗಳಂತೆ ಕಾಣುತ್ತವೆ. ಹಲವು ನಾಟಕಗಳ ತುಣುಕುಗಳನ್ನು ಪದ್ಯವಾಗಿ ಪರಿವರ್ತಿಸಿದ್ದಾರೆ. ಹೀಗೆ ಯಾಕೆ ಮಾಡಿದ್ದಾರೆ ಎನ್ನುವುದಕ್ಕೂ ಅನುವಾದದಿಂದ ಆಗಲಿರುವ ಬದಲಾವಣೆ ಕುರಿತು ಅವರದೇ ಅಭಿಪ್ರಾಯವನ್ನು ನೋಡಬಹುದು. ''ಇಂಗ್ಲೀಷ್ ಮಾರ್ಗಗಳ ಅನುಕರಣದಿಂದ ಇನ್ನು ಮುಂದೆ ಕನ್ನಡ ಕಾವ್ಯಗಳ ಪ್ರಬಂಧ ರಚನೆ, ಅಲಂಕಾರ ಇವುಗಳು ಹೀಗೆ ಬದಲಾಗ ಬಹುದೆಂದು ವಿಚಾರ ಮಾಡಿತ್ತು. ಕವಿಗಳು ಪಾರಮಾರ್ಥಿಕ ವಿಷಯಗಳಿಗಿಂತ ರಾಷ್ಟ್ರಿಕ, ಸಾಮಾಜಿಕ, ಚಾರಿತ್ರಿಕ ಮುಂತಾದ ಲೌಕಿಕ ಪ್ರಮೇಯಗಳಿಗೆ ಹೆಚ್ಚು ಗಮನಕೊಡುವರೆಂದು, ದೀರ್ಘ ಪುರಾಣಗಳ ಬದಲಾಗಿ ಲಘು ಕೃತಿಗಳನ್ನು ರಚಿಸುವರೆಂದೂ, ಛಂದಸ್ಸಿನಲ್ಲಿ ಹೊಸ ಮಾದರಿಗಳನ್ನು ಕಲ್ಪಿಸುವರೆಂದೂ, ಅಲಂಕಾರದಲ್ಲಿ ಅಚೇತನ ಪದಾರ್ಥಗಳಿಗೆ ವಾಕ್ ಶಕ್ತಿಯನ್ನು ಮಾನಸಿಕ ಭಾವಗಳಿಗೆ ಮೂರ್ತಿತ್ವವನ್ನು ಆರೋಪಿಸುವ ಉತ್ಪ್ರೇಕ್ಷೆಯು ರೂಢಿಯಾಗ ಬಹುದೆಂದು, ಹಳಗನ್ನಡಕ್ಕಿಂತ

ನಡುಗನ್ನಡವನ್ನು ಹೆಚ್ಚಾಗಿ ಪ್ರಯೋಗಿಸುವರೆಂದೂ ಸೂಚಿಸಿತ್ತು. . . . .'' 1 ಮುಂದೆ ಈ ಸೂಚನೆಗಳೆಲ್ಲ ಸಮರ್ಥ ಬರಹಗಳಾಗಿದ್ದು ಸತ್ಯ.

ಹಟ್ಟಿಯಂಗಡಿ ನಾರಾಯಣ ರಾಯರಿಗೆ ಹೊಸಗನ್ನಡ ಭಾಷೆ ಬರೆಯುವುದರ ಕಡೆಗೆ ಒಲವಿತ್ತು. ಹಳೆಗನ್ನಡವನ್ನೇ ಬರೆಯಬೇಕೆಂಬ ಹಠ ಅವರಿಗಿರಲಿಲ್ಲ. ಕಾವ್ಯದಲ್ಲಿ ಬಳಸುವಾಗಲೂ ಕೆಲವು ಬಾರಿ ಆಡುಮಾತುಗಳನ್ನು ತಂದರೂ ಹೆಚ್ಚು ಹೊಸತನವನ್ನು ಕಾಣುತ್ತಿರಲಿಲ್ಲ. ಅಲ್ಲಲ್ಲಿ ಸಾಂಸ್ಕೃತಿಕ ಮಾರ್ಪಾಡು ಕೂಡ ಕಂಡು ಬರುತ್ತದೆ. ಉದಾಹರಣೆಗೆ ಶಾಲೆ-ಮಠವಾಗಿದೆ, ನರ್ಸ್-ತಾಯಿ ಎಂದಿದೆ, ಜವ್ ಎಸ್ -ಜಾತಿಮತ ವೆಂದಿದೆ. ಹೀಗ ಅನೇಕ ಬದಲಾವಣೆಗಳು ಕಂಡು ಬರುತ್ತವೆ.

ಹಟ್ಟಿಯಂಗಡಿ ನಾರಾಯಣ ರಾಯರು ಕವಿತೆಯು ಪ್ರಾಸ ಬಿಡುವುದರ ಕುರಿತು ನಿರ್ದಾಕ್ಷಿಣ್ಯವಾಗಿ ಒಪ್ಪಲ್ಲ. ಬದಲಿಗೆ ತಮ್ಮ ರಚನೆಗೆ ದ್ವಿತೀಯ ಮತ್ತು ಅಂತ್ಯ ಪ್ರಾಸಗಳ ಆಯ್ಕೆಗೆ ಒಲಿಯುತ್ತಾರೆ. ''ಪ್ರಾಸವಿಲ್ಲದ ಪದ್ಯಗಳನ್ನು ಏಕೆ ರಚಿಸ ಬಾರದು ಎಂದು ಕೆಲವರು ಕೇಳುತ್ತಾರೆ. ಏಕೆ ಕೂಡದು ? ಸೀರೆಗೆ ಸೆರಗಿಲ್ಲದಿದ್ದರೇನು ? ಹಣೆಗೆ ಬೊಟ್ಟಿಲ್ಲದಿದ್ದರೇನು ?''1 ಹೀಗೆ ಸಾಗುವ ಇವರ ತರ್ಕವೇ ಪರಂಪರೆಯನ್ನ ಒಡೆದು ನಿಲ್ಲುವ ಮನಸ್ಸು ಮಾಡುತ್ತಿಲ್ಲ. ಹಾಗೆಂದು ಸಂಪೂರ್ಣ ಹಳೆಯ ರಚನೆಗಳಿಗೇ ಇವರು ಗಂಟು ಬೀಳಲಾರರು. ಕವಿತೆಗೆ ಹೊಸ ಭಾಷೆ, ಹೊಸಭಾವ ಬೇಕೆಂದೂ ಇವರು ತುಡಿಯುತ್ತಾರೆ. ಒಟ್ಟಾರೆ ಸಂಕ್ರಮಣ ಕಾಲಾವಸ್ಥೆಯ ಆ ಅನೇಕ ಇರುಸು ಮುರುಸುಗಳ ನಡುವೆಯೇ ಇವರನ್ನು ಗುರ್ತಿಸಬೇಕಾಗುತ್ತದೆ. ಆ ಒಂದು ಆಯಾಮವನ್ನು ಹೇಳಿದರೆ ಅದು ಸರಳೀಕರಣವಾಗುವ ಸಂಭವವೂ ಇದೆ.

ಆದ್ದರಿಂದ ಇವರು ಆಕಾಲದಲ್ಲಿ ಛಂದಸ್ಸನ್ನು ಬಳಸಿಯೂ ಅದನ್ನು ಶಿಥಿಲಗೊಳಿಸಿಕೊಂಡಿದ್ದಾರೆ. ಹಳೆಗನ್ನಡ ಹೊಸಗನ್ನಡಗಳ ಮಿಶ್ರಣದ ಭಾಷೆ ಒಂದೆಡೆ ಇದ್ದರೆ, ಮಿಕ್ಕಲ್ಲಿ ಆಡು ನುಡಿಗಳ ಬೆರಕೆಯೂ ಹೀಗಾ ಬೆರಳೆಣಿಕೆಯಷ್ಟು ಕಂಡು ಬರುತ್ತವೆ. ಇವರು ನಾಟಕದ ತುಣುಕುಗಳನ್ನು ಕಾವ್ಯ ವಾಗಿಸಿದ ಉದಾಹರಣೆಗಳನ್ನು ನೋಡಬಹುದು. ಶೇಕ್ಸ್ಪಿಯರನ 'AS YOULIKE IT' ನಾಟಕದ ಹಾಡು ಇದು.

ಬರಡಿ ಧೈರ್ಯವ ತಾಳು

ತೊರೆಯದಿರು ತೊರೆಯದಿರು

ಮರಳಿಯತ್ನವ ಮಾಡೆ ಸಿದ್ಧಿಸುವುದು

ಅನುವಾದದ ಕಾಲ ಸ್ಪಷ್ಟವಾಗಿ ರೂಪುಗೊಳ್ಳುತಲಿದ್ದಾಗ ಬರೆದ ಕವನವಿದು. ಇಲ್ಲಿನ ಲಲಿತ ಹಾಗೂ ಸರಳ ಮಾದರಿಯ ಕವನಗಳ ಶ್ರೇಷ್ಠತೆಯನ್ನು ಗುರುತಿಸಬೇಕಾದರೆ ಅವರ ಸಮಕಾಲೀನ ಕವಿತೆಗಳೊಂದಿಗೆ ಹೋಲಿಸಿ ನೋಡು ಬೇಕು.

ಎಸ್.ಜಿ. ನರಸಿಂಹಾಚಾರ್ ಅವರು ಮೈಸೂರು, ಬೆಂಗಳೂರು, ಧಾರವಾಡಗಳನ್ನು ತಮ್ಮ ಬರಹ, ಭಾಷಣ, ಅನುವಾದ ಕ್ಷೇತ್ರಗಳನ್ನಾಗಿಸಿಕೊಂಡಿದ್ದಾರೆ. ಇವರಿಗೆ ಮದ್ರಾಸಿನ ಪರಿಚಯವೂ ಇದೆ. ಅಂತಲೇ ಇವರ ಕವಿತೆಗಳನ್ನು ಗಮನಿಸಬೇಕಾದರೆ ಈ ಎಲ್ಲ ಹಿನ್ನೆಲೆಗಳ ಅವಶ್ಯಕತೆಯೂ ಇದೆ. ಇವರು ಶಾಸ್ತ್ರಗಳನ್ನು ಅನುವಾದಿಸಿದ್ದಾರೆ. ವಿವೇಕಾನಂದರ ಪ್ರಭಾವವೂ ಇವರ ಕವಿತೆಗಳ ಮೇಲಿದೆ.

ಪ್ರಧಾನವಾಗಿ ಎಸ್.ಜಿ. ನರಸಿಂಹಾಚಾರ್ಯರ ಅನುವಾದಗಳನ್ನು ಈ ರೀತಿ ವಿಂಗಡಿಸಬಹುದು.

I. ಸ್ವತಂತ್ರ ಬಿಡಿ ಕವಿತೆಗಳು

II. ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡ ಸಾಹಿತ್ಯ ಕೃತಿಗಳು

III. ಅನುವಾದಿತ ಬಿಡಿಗವಿತೆಗಳು

I. ಸ್ವತಂತ್ರ ಬಿಡಿಕವಿತೆಗಳು:
---------------------

ಪ್ರಧಾನವಾಗಿ ಕವಿಗಳೆಂದು ಪಂಡಿತರೆಂದು ಹೆಸರಾಗಿದ್ದ ಎಸ್.ಜಿ. ನರಸಿಂಹಾಚಾರ್ಯರು ರಚಿಸಿದ ೧೭ ಬಿಡಿಗವಿತೆಗಳು ಸಿಗುತ್ತವೆ. ಇವುಗಳು ಕ್ರಮೇಣ ಭೌಗೋಳಿಕ, ಸಾಂಸ್ಕೃತಿಕ, ವೈಯುಕ್ತಿಕ, ರಚನೆಗಳಾಗಿವೆ. ಜೊತೆಗೆ ಭಕ್ತಿಯನ್ನು, ಆಚರಣೆಯನ್ನು 'ಆಧುನಿಕ'ತೆಯನ್ನು ಕುರಿತ ರಚನೆಗಳೂ ಇಲ್ಲಿ ಬಂದಿವೆ. ತಮ್ಮ ಸುತ್ತ ಮುತ್ತಲಿನ ವಸ್ತುಗಳಿಗೆ ಕಾವ್ಯದ ಚೌಕಟ್ಟನ್ನು ಹಾಕಿ ರಚಿಸುವ

ಕವಿಗಳಂತೆ ಇವರೂ ಕೂಡ ನೇಗಿಲನ್ನು, ಚಂದ್ರನನ್ನು, ಆಕಳನ್ನು, ಮಳೆಗಾಲವನ್ನು, ಕಾಮನಬಿಲ್ಲು, ಕವಿ ಕುರಿತು ಬರೆದಿದ್ದಾರೆ.

ಕಾವ್ಯ ನಡುಗನ್ನಡದ ಬಿಗುವಿನಿಂದ ಹೊಸಗನ್ನಡಕ್ಕೆ ಹೊರಳುವ ಅನೇಕ ಲಕ್ಷಣಗಳು ಇವರ ಕವಿತೆಗಳಲ್ಲಿವೆ. ಇವರು ತಮ್ಮ ಬಿಡಿಕವಿತೆಗಳಲ್ಲಿ ಗೋವಿನ ಪ್ರತಿಮೆಯನ್ನೇ ಮತ್ತೆ ಮತ್ತೆ ಬಳಸಿದ್ದಾರೆ. ತತ್ವಪದಕಾರರಂತೆ ಎರಡರ್ಥವನ್ನು ಹೇಳುವ ಪ್ರತಿಮೆಯಾಗಿಯೂ ಇದನ್ನು ಗಮನಿಸಿದ್ದಾರೆ. ಉದಾಹರಣೆ 'ಆಕಳು' ಪದ್ಯದಲ್ಲಿ ಕಾಣಾಗುವ ಕ್ರಿಯೆ ನಿಮಿತ್ತಾರ್ಥವನ್ನು ನೀಡುತ್ತ ಶ್ರೀಕರವೇ ಪ್ರಧಾನಾರ್ಥವಾಗಿ ಬಳಕೆಯಾಗುತ್ತದೆ. ಆದರೆ 'ಗೋವಿನ ಚರಿತ್ರೆ'ಯು ಮಾನವ ಮತ್ತು ಪ್ರಾಣಿಗಳ ನಡುವಿನ ಅಂತರವನ್ನು ಹೇಳುವುದಾಗಿದೆ. ಅರ್ಥ, ಭಾಷೆ ಮತ್ತು ಲಯಗಾರಿಕೆಯ ದೃಷ್ಟಿಯಿಂದ ಇದು ಅತ್ಯಂತ ಸಮರ್ಥವಾಗಿ 'ಆಧುನಿಕ' ಕಾವ್ಯ ಲಕ್ಷಣವನ್ನು ಹೊಂದಿದೆ. ಉದಾಹರಣೆ,

ಹಾಯೆ ಹರಿಗೋಲಾದೆ, ರಾಯ ಬೇರಿಗೆ ಆದೆ
ರಾಯರಾ ಕಾಲಿಗೆ ಮುಳ್ಳೊತ್ತುವಾದೆ
ಆಯು ಪರಿತು ಹೊಡೆಯೆ ಮಧುರ ಗಾನಕ್ಕಾದೆ
ನೀನಾರಿಗಾದೆಯೋ ಎಲೆ ಮಾನವಾ ॥

ಇದೇ ಪ್ರತಿಮೆ ಜ್ಞಾನದ ಸಂಕೇತವಾಗೂ ಬಳಕೆಯಾಗಿದೆ. ಉದಾಹರಣೆಗೆ 'ಬುದ್ಧಿಯು ಬಲವೇ ಬಲ.' ಭಾಮಿನಿ ಷಟ್ಪದಿಯಲ್ಲಿರುವ ಈ ಪದ್ಯದ ಭಾವೋಕ್ತಿಗಳು ಉಳಿದ ಪದ್ಯಗಳೊಡನೆ ಸರಿಸುವಂತಿವೆ. ಹೀಗಾಗಿ ಅವರ ಪ್ರಾಣಿ ರೂಪದ ಪ್ರತಿಮೆಗಳಲ್ಲಿ ಒಂದು ರೀತಿಯ ಬೆಳವಣಿಗೆಯನ್ನು ಗುರುತಿಸ ಬಹುದು. ಉದಾಹರಣೆಗೆ 'ಕಾಲದ ಬೆಲೆ' ಪದ್ಯದ ಎರಡನೆಯ ನುಡಿಯನ್ನು ಈ ಪದ್ಯದ ಆರನೆಯ ನುಡಿಯ ಜತೆ ಹೋಲಿಸಿದರೆ ಇದು ಸ್ಪಷ್ಟವಾಗುತ್ತದೆ.

'ಆಧುನಿಕತೆ' ಕುರಿತಂತೆ ಅವರು ೧೯೦೬ರಲ್ಲಿ ರಚನೆಯಾದ 'ಹೊಗೆಯ ಗಾಡಿ' ಪದ್ಯ ನೋಡಬಹುದು. ಇದು ನಮ್ಮ ವ್ಯವಸ್ಥೆಯೊಳಗೆ ನಾಗರಿಕತೆ ಕಾಲಿಡುವುದರ ಸೂಚನೆಯನ್ನು ನೀಡುತ್ತದೆ. ಆದರೆ ಇವರು ಲಾವಣಿಕಾರರಂತೆ ಸಂಸ್ಕೃತಿಗೆ ಮಾರಕವಾಗಿ, ಬದುಕನ್ನು ಕಲಕುವ ಮಾಧ್ಯಮವಾಗಿ

ನೋಡದ ರೈಲುಗಾಡಿಯನ್ನು ಕೇವಲ ಹೊರರೂಪಿಯಾಗಿ ನೋಡುತ್ತಾರೆ. ಅತ್ಯಂತ ಸಂಭ್ರಮದಿಂದ ಹೊಗಳುತ್ತಾರೆ. ಇದಕ್ಕೆ ಸಾಕ್ಷಿಯಾಗಿ ಆರ್ಥಿಕ ದೃಷ್ಟಿಯೊಂದನ್ನೇ ಅವರು ನೀಡುತ್ತಾರೆ. ಉದಾಹರಣೆಗೆ

ಮೊಗವ ನೆತ್ತಿನ ಹೊರಳೊಳಿಡುವ ಪಾಡಿಲ್ಲ
ಬಿಗಿದ ಕುದುರೆಯ ಹೊಡೆವಾಯಸವಿಲ್ಲ
ಮಿಗೆಕಾಯ್ವ ನೀರ ಹಬೆಯಿಂದ ಬಲುಬೇಗ
ಹೊಗೆಯ ಗಾಡಿ ನೋಡು ಹೋಗುತಿಹುದೀಗ
: : : : : : : : : : : : : : : :
: : : : : : : : : : : : : : : :
ದಾರಿಯೊಳು ಕಳ್ಳ ಕಾಕರ ಭೀತಿಯಿಲ್ಲ
ಮೀರಿ ಬಹ ಮಳೆ ಬಿಸಿಲುಗಳ ಬಾಧೆಯಿಲ್ಲ
ದೂರ ದೇಶದ ಬೆಳೆಸ ಮೊಯ್ಯು ತರಬಹುದು
ಯಾರಿಗಿದರುಪಯೋಗಗಳ ಹೊಗಳಲಹುದು

## II. ಪ್ರಾಚೀನ ಮತ್ತು ಮಧ್ಯಕಾಲೀನ ಸಾಹಿತ್ಯ ಕೃತಿ :

ಎಸ್.ಜಿ. ನರಸಿಂಹಾಚಾರ್ಯರು ಸ್ವತಂತ್ರವಾಗಿ ರಚಿಸಿದ ಹಾಗೂ ಅನುವಾದಿಸಿದ ಗ್ರಂಥಗಳಲ್ಲಿ ದೊರೆಯುವ ಗ್ರಂಥಗಳಿಗಿಂತ ದೊರೆಯದ ಗ್ರಂಥಗಳೇ ಹೆಚ್ಚು. ದೊರೆಯುತ್ತಿರುವ ಕೆಲವು ಎಂದರೆ

೧. ‘ಪ್ರೋಷಿತ ಪ್ರಿಯ ಸಮಾಗಮಂ’ (೧೮೯೩-೧೯೦೦),

೨. ‘ದಿಲೀಪ ಚರಿತೆ’ (೧೮೯೭),

೩. ‘ಅಲ್ಲಾವುದ್ದೀನ್ ಮತ್ತು ಅದ್ಭುತ ದೀಪ’ (೧೮೯೯),

೪. ‘ಅಜನೃಪ ಚರಿತೆ’ (೧೯೦೦),

೫. ‘ಉತ್ತರ ರಾಮ ಚರಿತಂ’ (೧೯೦೦),

೬. ‘ಭಾರತ ವೀರ ಚರಿತೆ’

ದೊರೆಯುತ್ತಿರುವವು ಎಂದರೆ ೧. 'ಗಲಿವರನ ದೇಶ ಸಂಚಾರ'

೨. 'ಈಸೋಪನ ನೀತಿಕಥೆಗಳು',

೩. 'ಗಯ್ಯಾಳಿಯನ್ನು ಸಾಧುಮಾಡುವಿಕೆ',

೪. 'ಭಾರತಿ',

೫. 'ಮುಕುಂದ ಮಾಲೆ'.

ಈ ಕೃತಿಗಳು ಕಂದ, ಷಟ್ಪದಿಗಳಲ್ಲಿ ರಚಿತವಾಗಿದ್ದರೂ ಸರಳ ಶೈಲಿ, ನಿರರ್ಗಳ ಭಾಷೆಯಲ್ಲಿವೆ. ಮಕ್ಕಳ ಪಠ್ಯಗಳಾಗಿಯೂ ಇವು ಇದ್ದವೆಂದು ''ಮಾಸ್ತಿಯವರು ಹೇಳಿದ್ದಾರೆ.''2

III. ಅನುವಾದಿತ ಬಿಡಿಕವಿತೆಗಳು :

ಒಳ್ಳಿತಾಗಲಿ ನಿನಗೆ
ಒಳ್ಳಿತಾಗಲಿ ನಿನಗೆ
ಒಳ್ಳಿತಾಗಲಿ ನಿನಗೆ ಬೆಳಗುತನಕ
ಒಳ್ಳೆ ಕನಸುಗಳು ಕ
ನಿನ್ನಲ್ಲಿ ಸುಳಿಯಲಿ ಮಗುವೆ
ಉಲ್ಲಸದಿ ಮಲಗುವಾ ಹೊತ್ತಾಯಿತು

ಹೀಗೆ ಸರಳವಾಗಿ ಸಾಗುವ ಜಿ.ಪಿ. ನರಸಿಂಹಾಚಾರ್ ಅವರ ಅನುವಾದಿತ ಕವಿತೆಗಳು ಒಟ್ಟು ಹನ್ನೊಂದು. ಇವೆಲ್ಲಾ ರೀತಿಯಲ್ಲಿ ಚಂಪಕಮಾಲಾ, ಮಾತ್ರಾ ಚೌಪದಿ, ಸಾಂಗತ್ಯ, ಷಟ್ಪದಿಗಳನ್ನು ಹೊಂದಿವೆ.

ಕಾವ್ಯ ವಸ್ತುಗಳಲ್ಲೂ ಗತಕಾಲದ ವರ್ಣನೆ, ಸಾಮಾನ್ಯರನ್ನು ಕಾವ್ಯ ವಸ್ತುವಾಗಿ ನೋಡುವ ಬಗೆ ಇದೆ. ಸುತ್ತಲಿನ ಅನುಭವ ಪ್ರಪಂಚ ಸಾಗುವ ಇಲ್ಲಿನ ಕ್ರಮಗಳ ನಡುವೆ 'ನಕ್ಷತ್ರ', 'ಬಿಡುವು', 'ಮಕ್ಕಳು ಮಲಗುವ ಹೊತ್ತು', 'ಮರಳಿಯತ್ನವ ಮಾಡು' ಈ ಕವಿತೆಗಳು ಸಮೃದ್ಧ ಭಾಷೆ ಮತ್ತು ಲಯಗಾರಿಕೆಯನ್ನು ಹೊಂದಿವೆ. ಇವು 'ಆಧುನಿಕ'ನಿಕ ಕನ್ನಡ ಕಾವ್ಯದ ಹೊಸಮಾರ್ಗವನ್ನು ಸ್ಪಷ್ಟವಾಗಿ

ತೋರುವಂತಿವೆ. ಮಕ್ಕಳಿಗೆಂದೇ ರಚಿತವಾದ ಈ ಪುಟ್ಟ ಕಥೆಗಳು ಮುಂದೆ ಕಥನ ಕವನಗಳ ಸಂಪ್ರದಾಯಕ್ಕೂ ಹಾದಿಯಾಯ್ತೇನೋ. ಒಟ್ಟಲ್ಲಿ ಇರುವ ಹನ್ನೊಂದರಲ್ಲೇ ಸಿಗುವ ಈ ನಾಲ್ಕು ಉತ್ತಮ ರಚನೆಗಳು ಅವರ ಕಾವ್ಯ ಅಧ್ಯಯನದ ಕುತೂಹಲವನ್ನು ಇನ್ನು ಸೂಕ್ಷ್ಮಗೊಳಿಸುತ್ತವೆ.

ಬಿ.ಎಂ. ಶ್ರೀಕಂಠಯ್ಯ

ಮತ್ತೆಮತ್ತೆ ಓದುವ ಕುತೂಹಲವನ್ನು ಉಂಡುಕೊಟ್ಟ ಕಾಲ,
ಸರಳತೆ ಸಹಜತೆಗಳ ಅನುವಾದದ ಕಾಲ,
ಮುದ್ದಣ್ಣ ಮನೋರಮೆ ನಂತರ ಪ್ರೇಮ ಪ್ರೀತಿಗಳ ಚಿಕ್ಕ ಚೊಕ್ಕ ಸಂವಾದ ನಡೆಸಿದ ಕಾಲ.

'ಆಧುನಿಕ' ಕಾವ್ಯದ ದೃಷ್ಟಿಯಿಂದ ಇದು ಅತ್ಯಂತ ಮಹತ್ವದ ಸಾಹಿತಿಗಳಿಗೆ ಜನ್ಮ ಕೊಟ್ಟ ಅಪೂರ್ವ ಕಾಲವಾಗಿದೆ. ಅಲ್ಪಪ್ರಮಾಣದ ಚಲನಶೀಲತೆಯಲ್ಲಿದ್ದ ಕನ್ನಡ ಕಾವ್ಯಕ್ಕೆ ಶ್ರೀಯವರುಬಂದು ಹೊಸಕಾಲುವೆಗಳನ್ನು ನಿರ್ಮಿಸಿ, ಹೊಸ ಬೆಳೆಯನ್ನು ಹೊಮ್ಮಿಸುವುದರ ಮೂಲಕ ಚಲನಶೀಲತೆಯನ್ನು ತೀವ್ರಗೊಳಿಸಿದವರಲ್ಲಿ ಅತ್ಯಂತ ಮುಖ್ಯರು. ಈ ನಿಟ್ಟಿನಲ್ಲಿ ಅವರ 'ಇಂಗ್ಲೀಷ್ ಗೀತಗಳು' ನಿಜಕ್ಕೂ ಅನನ್ಯ. ಇವು ಕೇವಲ ಅನುವಾದಗಳಾಗದೆ, 'ಆಧುನಿಕ' ಕನ್ನಡ ಕಾವ್ಯಕ್ಕೆ ಹೊಸರೂಪ, ಹೊಸ ಭಾಷೆಯನ್ನು ಕೊಡಿಸಿದ ನಿಜ ಪ್ರಯೋಗಗಳು ಹೌದು.

ಇವು ಹುಟ್ಟಿಕೊಂಡದ್ದು ತತ್ವಪದಕಾರರ, ಲಾವಣಿಕಾರರ ರೀತಿಯಲ್ಲಿ ಅಲ್ಲ. ವಚನ ರೀತಿಯಲ್ಲಿ, ವಚನಕಾರರ ರೀತಿಯಲ್ಲಿ. ಜಾನಪದದಂತೆ ಇಲ್ಲಿಯ ಕವನಗಳೂ ಕೂಡ ವ್ಯಕ್ತಿನಿಷ್ಠವಾಗಿವೆ. ಶಿವರುದ್ರಪ್ಪನವರು ಅಭಿಪ್ರಾಯ ಪಡುವಂತೆ ''ವಿಮರ್ಶೆಯ ಸಂದರ್ಭದಲ್ಲಿ ಅವರ ಇಂಗ್ಲೀಷ್ ಗೀತಗಳು ಚರ್ಚೆಯ ವಿಷಯ ವಾಗದಿದ್ದರೂ, ಅವರ ಸ್ವತಂತ್ರ ಕವಿತೆಗಳ ಸಾಲಿನಲ್ಲಿರುವ ಪ್ರಗಾಥಗಳು ನಿಸ್ಸಂದೇಹವಾಗಿಯೂ ಕನ್ನಡಕ್ಕೆ ಒಳ್ಳೆಯ ಕೊಡುಗೆಗಳಾಗಿವೆ. ಈ ಪ್ರಗಾಥಗಳೊಳಗಿನ ರಾಜನಿಷ್ಠೆ ಧೋರಣೆಯನ್ನು ಇಂದು ನಾವು ಮೆಚ್ಚದಿದ್ದರೂ ಅವುಗಳ ಬಂಧ-ಶಿಲ್ಪ-ಛಂದಸ್ಸಿನ ಹಾಗೂ ಅವುಗಳಲ್ಲಿ ಮಿಡಿಯುತ್ತಿರುವ ಕನ್ನಡ ಪ್ರೇಮ ಇವುಗಳನ್ನು ಕಡೆಗಣಿಸಲು ಸಾಧ್ಯವೇ ಇಲ್ಲ'' [3]

ಶ್ರೀಯವರ ಗ್ರಂಥಗಳು ಕಡಿಮೆ. ಅದನ್ನು ಕುರಿತು ಈಗಾಗಲೇ ಬೇಕಾದಷ್ಟು ಪ್ರಬಂಧಗಳು ಬಂದಿವೆ. ಭಿನ್ನಾಭಿಪ್ರಾಯಗಳಿರುವಲ್ಲಿಯೂ ಅವುಗಳ ಗುಣಾವಗುಣಗಳು ಎಲ್ಲರಿಗೂ ಒಂದಿಗೂ ಕಾಣತಕ್ಕವೇ. ಶ್ರೀಯವರ ಬರಹಗಳಲ್ಲಿ ಪ್ರಧಾನವಾಗಿರುವ ಕಾಳಜಿ ಕನ್ನಡ ಉಳಿಸುವುದು ಬೆಳೆಸುವುದು.

ಶ್ರೀಯವರ ಕಾಲದಲ್ಲಿದ್ದುದು ಪ್ರಧಾನವಾಗಿ ಮುಂದುವರಿಕೆಯ ಗುಣ. ಹಿಂದಿನ ಕನ್ನಡ ಕೃತಿಗಳಲ್ಲಿ ಬಳಸುತ್ತಿದ್ದ ವೃತ್ತ ಕಂದಗಳ ಪ್ರಯೋಗ 'ಆಧುನಿಕ' ಕಾವ್ಯಕ್ಕೆ ಅಷ್ಟಾಗಿ ಒಗ್ಗುವುದಿಲ್ಲ. ನಡುಗನ್ನಡದ ಎಲ್ಲ ಮಾರ್ಗಗಳೂ ಎಲ್ಲ ಕವಿ ಕರ್ಮಕ್ಕೂ ಹೊಂದುವುದಿಲ್ಲವೆಂದು ಶ್ರೀ ಅರಿತಿದ್ದರು.

ಶ್ರೀಯವರು ತಮ್ಮ ಪ್ರಾರಂಭಿಕ ಕೃತಿಯಲ್ಲಿ ಸ್ವಲ್ಪ ಮಟ್ಟಿಗೆ ಮಿಶ್ರ ಬಳಕೆಯ ಸ್ವಾತಂತ್ರ್ಯವನ್ನು ವಹಿಸಿದ್ದಾರೆ. ಅಚ್ಚಕನ್ನಡ ವೆನ್ನಬಹುದಾದ ಛಂದಸ್ಸು, ಮಾತ್ರೆಗಳನ್ನೇ ಬಳಸಿಕೊಂಡು ಆದಿಪ್ರಾಸವನ್ನು ಬಿಟ್ಟು ಅಂತ್ಯ ಪ್ರಾಸವನ್ನು ಅಗತ್ಯಬಿದ್ದಲ್ಲಿ ಬಳಸಿದ್ದಾರೆ. ನಾದ ಕ್ರಿಯೆಯನ್ನು ಅರ್ಥ ಸಾಧನೆಗೂ ಬಳಸಿಕೊಂಡಿದ್ದಾರೆ.

ಹಾಗೆಂದು ಶ್ರೀಯವರು ''ಸಂಪ್ರದಾಯ ಮಾರ್ಗವೇ ಬೇಕೆಂದು ಛಲ ಹಿಡಿದಿಲ್ಲ. ವಿಶ್ವ ಕವಿತಾ ವಿಷಯಗಳಾದ, ಯುದ್ಧ, ಪ್ರೇಮ, ಮರಣ, ದೇಶ ಭಕ್ತಿ, ದೈವ ಭಕ್ತಿ, ಪ್ರಕೃತಿ ಸೌಂದರ್ಯ ಮಾನವ ಜನ್ಮದ ಸುಖದುಃಖಗಳು, ರಾಗದ್ವೇಷಗಳು, ಪುರುಷಾರ್ಥಗಳು, ಜನ್ಮಾಂತರ ದರ್ಶನಗಳು ಮುಂತಾದ ಕಾವ್ಯ ವಸ್ತುಗಳನ್ನು ಇತರ ದೇಶ ಕವಿಗಳು ಯಾವ ರೀತಿಯಲ್ಲಿ ವ್ಯಕ್ತಗೊಳಿಸಿ ಸಹಜ ಭಾಷೆಯಲ್ಲಿ ಸೌಂದರ್ಯ ರಚನೆಯನ್ನು ಮಾಡಿರುವರೋ ಅದನ್ನೆಲ್ಲ ಪರಾಮರ್ಶಿಸಿ ಬರೆಯ ಬೇಕೆಂದು ಇವನ್ನು ಬರೆದಿದ್ದೇವೆ ಎಂದಿದ್ದಾರೆ''[2] ಶ್ರೀಯವರ ಉದ್ದೇಶ ಅಚ್ಚ ಕನ್ನಡಿಗರಿಗೂ ಪಾಶ್ಚಾತ್ಯ ಸಾಹಿತ್ಯದಲ್ಲಿ ಅಭಿರುಚಿ ಹುಟ್ಟಬೇಕೆಂಬುದು. ಈ ಕಾರಣದಿಂದ ಭಾವ-ಭಾಷೆಗಳೆರಡರಲ್ಲಿಯೂ ಅತ್ಯುದಾರತೆಯ ಪಕ್ಷವನ್ನು ವಹಿಸಿದರು ಉದಾಹರಣೆ,

ಹೀಗೆ ನಮಗೆ ಹಬ್ಬವಾಗಿ,

ಇನಿಯರಿಬ್ಬರನ್ನು ತೂಗಿ

ಇವಳ ಸೊಬಗನವಳು ತೊಟ್ಟು

ನೋಡ ಬಯಸಿದೆ;

ಅವಳ ತೊಡಿಗೆ ಇವಳಿಗಿಟ್ಟು

ಹಾಡ ಬಯಸಿದೆ

ಇಂಗ್ಲೀಷ್, ಕನ್ನಡ, ಸಂಸ್ಕೃತ, ತಮಿಳು ಛಂದಸ್ಸನ್ನು ಬಲ್ಲ ಶ್ರೀಯುವರ ಹೃದಯ ಭೂಮಿ ವಿಶಾಲ. ಅಲ್ಲಿ ಮೂರಾರು ಪರತೆಗಳು ಹರಿಯುತ್ತಲೇ ಇದ್ದರೂ ಅವೆಲ್ಲಾ ಏಕ ವೇಗಯಾಗಿ ಕನ್ನಡದ ಕ್ಷೇತ್ರವನ್ನೇ ಫಲವತ್ತಾಗಿ ಮಾಡಬೇಕೆಂಬುದಾಗಿತ್ತು. ಉದಾಹರಣೆಗೆ,

ಬಾಳೆ ಕನ್ನಡ ತಾಯೆ

ಏಳೆ ಕನ್ನಡ ತಾಯೆ

ಆಳೆ ಕನ್ನಡ ತಾಯೆ

ಕನ್ನಡಗರೊಡತಿ ಓ ರಾಜೇಶ್ವರಿ

ಶ್ರೀ ಕವನಗಳಿಗೆ ಪ್ರಮುಖವಾಗಿ ನಿಸರ್ಗ ಕುರಿತಂತೆ, ಪ್ರೇಮ ಮತ್ತು ಅದರ ಆವೇಶಗಳನ್ನು; ದುರಂತಗಳನ್ನು ಕುರಿತಂತೆ. ಶಕುಂತಕ್ಷಿಗಳನ್ನು ಕುರಿತಂತೆ. ಒಂದು ನೆಲೆಯಿಂದ. ಕನ್ನಡ ಕುರಿತಂತೆ, ಬದುಕನ್ನು ಕುರಿತಂತೆ, ಪ್ರಭುತ್ವವನ್ನು ಕುರಿತಂತೆಯೂ ರಚನೆಯಾಗಿವೆ. ಅವನ್ನೆಲ್ಲಾ ಸ್ಥೂಲವಾಗಿ ಹೀಗೆ ನೋಡಬಹುದು.

೧. ಇವರ ಕವಿತೆಗಳಿಗೆ, ಕಳೆತನ್ನು ಬೇಡವೆನ್ನುತ್ತ ಹೊಸತನಕ್ಕಾಗಿ ತುಡಿಯುವ ಹರಿಯಿಂದ. ಈ ಕ್ರಮ ಜಡ, ನಿಶ್ಚಲ ಸ್ಥಿತಿಯ ಚಲನಶೀಲ ಮತ್ತು ಜೀವಂತಿಕೆಯನ್ನು ಬಯಸುವುದಾಗಿದೆ. ಉದಾ:

ಎಲೆ ಮುಂದೆ ಸಾರತ್ತೆ,

ಯಶವನ್ನ ಬಾರಿತ್ತ,

ಬರು ವಳದೋ ಚಕ್ಕವಳು ನನ್ನ ಚಲುವೆ

ಮುಂದೆ, ನಡೆ, ನಡೆ, ಒಲ್ಲೆ

ಉದಾಹರಣೆಗೆ :

"ಕವಿಯು ನಲುಗಿ, ತಲೆಯಮೋರೆದು ಬಾಲವನ್ನು ಕುಣಿಸಿ ನಲಿದು,
ಅವಳ ಕೈಯ್ಯ ತಿಂಡಿಯನ್ನು ಮುದ್ದಿನಿಂದ ಸವಿವ ಮರಿಗೆ,
"ಕುಡಿಯೋ ಕಂದ, ಕುಡಿಯೊ " ಎಂದು ನುಡಿಯುದನಿಯು ಕೇಳಿದೊಡನೆ
ಅವಳ ಹೃದಯವೆಲ್ಲ ಹೃದಯದಲ್ಲಿ ಕರಗಿ ಹೋಯಿತು"

ಇಲ್ಲಿನ ನಾಯಕಿಯೂ ಕವಿಯು ಹಾಗೇ ಪ್ರಾಣಿಗಳ ಖಾಸಗೀ ಲೋಕಕ್ಕೆ ನಡೆದಿದ್ದಾಳೆ ಹಾಗಾಗಿ "ನಿನಗೆ ನೀನೆ ಏನುವರಿಲ್ಲವೆಂದು" ಆಕೆ ಪ್ರಾಣಿ ಜೊತೆ ಸಂವಾದ ನಡೆಸಿದ್ದಾಳೆ. ಹಾಗಾಗಿ ಕವಿಗೆ ವ್ಯಕ್ತಿ ಸಂಬಂಧದ ಅನುರಾಗ ಗಳಿರುವಂತೆ ಇಲ್ಲಿ ನಾಯಕಿಗೆ ಪ್ರಾಣಿ ಸಂಬಂಧದ ಅನುರಾಗವಿದೆ.

"ಬಾನಾಡಿ"ಹಕ್ಕಿಯು ಸ್ಥೂಲ ರೂಪಿನಿಂದ ಹೊರಟು ವಿಸ್ತಾರವಾಗುತ್ತ ಇಡೀ ನಿಸರ್ಗವನ್ನೇ ಒಳಗೊಳ್ಳುವ ಕವನವಾಗಿದೆ. ಈ ಮಾದರಿ ಮುಂದೆ ಅನೇಕ ಪ್ರಧಾನ ಕವಿಗಳ ರೀತಿಯೂ ಆಗಿರುವುದನ್ನು ಇಲ್ಲಿ ಗಮನಿಸಬೇಕು. ಉದಾ: ಬೇಂದ್ರೆ, ಕುವೆಂಪು, ಪು.ತಿ.ನ.

"ವೀರಗಲ್ಲು " "ಕಾಳಗದ ಹದ" ಈ ಮಾದರಿ ರಚನೆಗಳು ಕೂಡ ಮುಂದೆ ಕುವೆಂಪು ವಸ್ತುಗಳೂ ಆಗಿವೆ.

೪. ಪ್ರೇಮಕವನಗಳಂತೂ ಶ್ರೀಯುತರನ್ನು ಜನಪ್ರಿಯತೆಯ ತುದಿಗೆ ಮುಟ್ಟಿಸಿದ ಬಗೆಗಳಾಗಿವೆ. ಇಲ್ಲೆಲ್ಲ 'ವಾಹ್' ಎಂದು ಉದ್ಗಾರ ಬರಿಸುವ ಸೌಂದರ್ಯವಿದೆ. ಎದೆಬಿಚ್ಚಿ ಹೇಳಿದ ಮಾತುಗಳಿವೆ. ಭಾವಗಳು ಕಾಡುವ ಹಾಡಾಗಿವೆ. ಉದಾಹರಣೆಗೆ:

೧. ಕವಿ ತನ್ನ ಪ್ರೇಯಸಿಯನ್ನು ಕಾಣುವ ರೀತಿ,

ನನ್ನ ಪ್ರೇಮದ ಹುಡುಗಿ ತಾವರೆಯ ಹೊಸಕೆಂಪು
ತಾವರೆಯ ಹೊಸ ಅರಳ ಹೊಳೆವ ಕೆಂಪು
ನನ್ನ ಪ್ರೇಮದ ಹುಡುಗಿ ಕೊಳಲ ಮೆಲುದನಿಯಿಂಪು
ಕೊಳಲು ಮೋಹಿಸಿ ನುಡಿವಗಾನದಿಂಪು

೨. ಇಲ್ಲಿ ಹೆಣ್ಣು ಬರುವ ರೀತಿ,

ಚಿಮ್ಮುತ ಸಿರಿಯಮ ಬನದಲಿ ಬಂದಳು
ಬಿಂಕದ ಸಿಂಗಾರಿ;
ಹೊಮ್ಮಿದ ಹಸುರಲಿ ಮೆರೆಯುತ ಹಕ್ಕಿ
ಕೊರಳಿನ ದನಿ ತೋರಿ

ಮುಂದೆ ಮೈಸೂರು ಮಲ್ಲಿಗೆಯಂತಹ ಕವನಗಳು ಹುಟ್ಟಿದ್ದು ಇಂತಹ ಭಾವಗಳಲ್ಲೇ ಅಂತಹ ಮೃದು ಭಾವಗಳನ್ನು ಹಿಡಿಯುವ ಬಗೆ ನೋಡಿ.

ಆಗ ಕಂಡೆನು ಕಣ್ಣು ಹೊಳಪನು,
ಒಲುಮೆ ತುಳುಕುವ ಬೆಳಕನು,
ಈಗ ನೋಡಳು, ನಾಚಿ ಮರೆವಳು
ನಾನು ನೋಡಲು ಮುನಿವಳು,
ಏನೆ ಮಾಡಲಿ ಹಿಡಿಯ ಬಲ್ಲೆನು
ಕಣ್ಣೊಳೊಲಿಪಿನ ಬೆಳಕನು,
ಅವಳ ಹುಬ್ಬಿನ ಗಂಟೆ ಚೆಂದವೋ !
ಏತ ಕುಳಿದರ ನಗೆಗಳು !

ಪ್ರೇಮ ಕುರಿತ ಕಥನ ಕವನಗಳಲ್ಲಿ ಹಲವು ಸಂಕೀರ್ಣ ಕವನಗಳನ್ನು ಶ್ರೀ ಬರೆದಿದ್ದಾರೆ. ಉದಾಹರಣೆಗೆ ''ಮುದಿಯ ರಾಮೇಗೌಡ''

ಇದು ಹೆಣ್ಣಿನ ಬಹು ಸೂಕ್ಷ್ಮ ಪ್ರಣಯಾಕಾಂಕ್ಷೆ ಮತ್ತು ಪರಿಣಾಮಗಳನ್ನು ಹಿಡಿದಿದೆ. ಮನೆಯ ಸ್ಥಿತಿ ಆಕೆಯ ಪ್ರಣಯ ಗತಿಯನ್ನು ಬದಲು ಮಾಡದಾಗ ಆಕೆ 'ಪಾಪಿ'ಎಂದು ಕೊಳ್ಳುವ ಬಗೆ, ಎದೆಗಟ್ಟಿ ಮಾಡಿಕೊಳ್ಳುವ ಹವಣಿಕೆ. ಭಾರತೀಯ ಕುಟುಂಬದೊಳಗಿನ ಸೂಕ್ಷ್ಮ ವಿವರಗಳ ದಾಖಲೆ ಆಗಿಬಿಟ್ಟಿದೆ. ಈ ಎಲ್ಲದರ ಆಚೆ ಮುದಿಯ ರಾಮೇಗೌಡನ ಪ್ರೀತಿಯನ್ನು ಜೋಡಿಸಿ ಇದನ್ನು ಸಂಕೀರ್ಣತೆಯ ಉತ್ತಮ ಕವನ ಮಾಡಲಾಗಿದೆ.

ಹೆದರದಿರು ಶಿಶು ನನಗೆ
ಕೊರಲಾರದಳಲಿಂದ ನೊಂದವನು ತಂದವನು
ತೋರಿಸುವೆನ ಹೇಳು ನಿನಗೆ ?

ಹೀಗೆ ಎಲ್ಲಾ ಪದ್ಯಗಳೂ ಇಲ್ಲ. ಕೆಲವು ಹೊಸ ಹಳೆ ರೂಪಗಳ ಸಮ್ಮಿಶ್ರ ಕವನಗಳಾಗಿವೆ. ಕೆಲವು ಜಡ ರಚನೆಗಳೂ ಉಳಿದುಕೊಂಡಿವೆ. ಆದರೆ ಆ ಎಲ್ಲವನ್ನೂ ಮೊದಲು ಮಾಡಿ ಚರ್ಚಿಸಿ ತೂಗುವುದಕ್ಕಿಂತ ಮುಂದೆ 'ಆಧುನಿಕ' ಕಾವ್ಯದ ಮಹತ್ವದ ಕವಿಗಳಿಗೆ ಈ ಸಂಕಲನ ಯಾವ ಬಗೆಯಲ್ಲಿ ಬೀಜರೂಪಿಯಾಯ್ತು ಎನ್ನುವ ಬಗೆಯಲ್ಲಷ್ಟೇ ಗಮನಿಸಿದರೆ ಉಚಿತವಾದೀತೇನೋ.

ಒಟ್ಟಿನಲ್ಲಿ ಶ್ರೀಯವರಿಗೆ ಮುಂಚೆ ಜರುಗಿದ ಚಟುವಟಿಕೆಗಳು ಮತ್ತು ಅವರ ಪ್ರಯತ್ನಗಳು ಖಂಡಿತ ಕುವೆಂಪು, ಮಾಸ್ತಿ, ಮತ್ತು ಬೇಂದ್ರೆ ಕವನಗಳಿಗೆ ಪ್ರೇರಣೆಯಾದವೆನ್ನುವಲ್ಲಿ ಎರಡು ಮಾತಿಲ್ಲ. ಹಾಗೆ ನೋಡಿದರೆ ಈ ಬಗೆಯ ಹೊಸತನ ಕೇವಲ ಅಕ್ಷರ ಕಾವ್ಯದಲ್ಲಷ್ಟೇ ಅಲ್ಲ. ಅಕ್ಷರ ಕಾವ್ಯವನ್ನು ಮೀರಿದ ಹೊಸತನ, ಆಧುನಿಕತೆಗಳು ಆ ಕಾಲದ ತೋಂಡಿ ಸಂಪ್ರದಾಯದಲ್ಲೂ ಬಂದಿವೆ. ಶ್ರೀ, ಹಟ್ಟಿಯಂಗಡಿ, ಎಸ್.ಜಿ.ನ ಕವಿತೆಗಳಲ್ಲಿದ್ದ ಸಾಮಾಜಿಕ ಕಳಕಳಿ, ಬಂಡಾಯ ಪ್ರವೃತ್ತಿ ತೋಂಡಿ ಸಂಪ್ರದಾಯದಲ್ಲಿದೆ. ಅಂತಲೇ ಈ ಬಗೆಯೂ ಮುಂದಿನ ಮಹತ್ವದ ಕವಿಗಳ ಕಾವ್ಯ ವಸ್ತುವಾಯ್ತು. ಉದಾಹರಣೆಗೆ:

ನನ್ನ ಹಸಿವೆಯು ಕಿಚ್ಚು ಧಗಧಗಿಸಿ ಹೊತ್ತಿಹುದು ಎಲ್ಲಿಹುದು ತುತ್ತುರೊಟ್ಟಿ ?
ನನ್ನ ಬಾಳಿನ ಹೊಂಡ ಕೆಂಡವಾಗಿಹುದಯ್ಯ, ಎಲ್ಲಿಹುದು ತುತ್ತು ರೊಟ್ಟಿ ?
ನನ್ನ ಹೊಟ್ಟೆಯು ಉರಿಯು ಆಕಾಶ ಕಡರಿಹುದು ಎಲ್ಲಿಹುದು ತುತ್ತು ರೊಟ್ಟಿ ?
ಅನ್ನದಾ ಹೊಳೆಯಲ್ಲಿ ಈಜುವರ ಸುಡುತಿಹುದು ಎಲ್ಲಿಹುದು ತುತ್ತು ರೊಟ್ಟಿ

ಕಾಪಸೆ ರೇವಪ್ಪನವರ ಈ ಕಾವ್ಯ ೧೯೨೨ರ ಸುಮಾರಿನಲ್ಲೇ ರಚನೆಯಾದುದು. ಹಾಗಾಗಿ ಈ ಕಾಲದ ಆಜುಬಾಜಿನ ರಚನೆಗಳೂ ಕೂಡ ಮುಂದಿನ ಮಹತ್ವದ ರಚನೆಗಳಿಗೆ ದಾರಿಯಾದವು ಎಂಬುದನ್ನು ಮರೆಯಬಾರದು.

## ಉಲ್ಲೇಖಗಳು.

1. ಪಂಡಿತಾರಾಧ್ಯ ಎಂ.ಎಸ್.ವಿ. : ಆಂಗ್ಲ ಕವಿತಾವಳಿ. ಪುಟ 5

2. ಮಾಸ್ತಿ : ಆರಂಭದ ಆಂಗ್ಲ ಸಾಹಿತ್ಯ ಮತ್ತು ನಮ್ಮ ಸಾಹಿತ್ಯದ ಆರಂಭ. ಪುಟ 48

3. ಜಿ.ಎಸ್. ಶಿವರುದ್ರಪ್ಪ : ನವೋದಯ. ಪುಟ 35.

ಎರಡೂ ಪರಂಪರೆಗಳಿಂದ ಮತ್ತು ಇರಾಣಿಯ ಸಂಸ್ಕೃತಿಗಳಿಂದ ಪ್ರಭಾವ ಪಡೆದಿರುವ 'ಆಧುನಿಕ' ಕಾವ್ಯ ಹಾಲು ತುಪ್ಪವನ್ನು ನುಂಗಿದಂತಿದೆ. ಸೂಫಿ ಸಂತರು ಮಾಡಿದಂತೆ ಇದು ಇಂದು ಎರಡಳಿದು ಒಂದಾಗುವ ಪರಿಯತ್ತ ಬರಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನ ಒಂದು ಸಣ್ಣ ಪ್ರಯತ್ನ. ಹಾಗಾಗಿ ಇದು ಇನ್ನೂ ಇಂತಹ ಸೂಕ್ಷ್ಮ ನಿರೀಕ್ಷೆಗಳಿಂದ ವಿಸ್ತಾರಗೊಳ್ಳುವ ಸಾಧ್ಯತೆಯನ್ನು ಪಡೆದಿದೆ.

## ಗ್ರಂಥ ಸೂಚಿ


೧. ಅನಂತನಾರಾಯಣ ಎಸ್: ೧೯೬೨ : ಹೊಸಗನ್ನಡದ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ : ಗಂಗಾ ತರಂಗ, ಮೈಸೂರು.

೨. ಕೀರ್ತಿನಾಥ ಕುರ್ತಕೋಟಿ : ೧೯೬೨ : ಯುಗಧರ್ಮ ಹಾಗೂ ಸಾಹಿತ್ಯ ದರ್ಶನ : ಮನೋಹರ ಗ್ರಂಥಮಾಲೆ, ಧಾರವಾಡ.

೩. ಕೀರ್ತಿನಾಥ ಕುರ್ತಕೋಟಿ : ೧೯೯೫ : ಕನ್ನಡ ಸಾಹಿತ್ಯ ಸಂಗಾತಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಕೃಷ್ಣೇಗೌಡ. ಹಾ. ತಿ : ೧೯೮೯ : ಕೆರೋಡಿ ಸುಬ್ಬರಾಯರು : ಜೀವನ ಮತ್ತು ಕೃತಿಗಳು, ಕನ್ನಡ ಅಧ್ಯಯ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು.

೫. ಕೇಶವ ಶರ್ಮ. ಕೆ. ನವೋದಯ ವಿಮರ್ಶೆ. ೧೯೯೦: ಜನವಾದಿ ಪ್ರಕಾಶನ, ಗುಂಡ್ಮಿ.

೬. ಗೋವಿಂದರಾಜ್ ಗಿರಡ್ಡಿ : ೧೯೮೫ : ಸಾಹಿತ್ಯ ಪರಂಪರೆ : ಅಭಿಜಾತ ಗ್ರಂಥಮಾಲೆ. ಬೆಂಗಳೂರು.

೭. ಚನ್ನಣ್ಣ ವಾಲೀಕಾರ :೧೯[illegible]: ಗುಲ್ಬರ್ಗಾ ಜಿಲ್ಲೆಯ ಮೊಹರಂ ಪದಗಳು, ಕನ್ನಡ ಅಧ್ಯಯನ ಸಂಸ್ಥೆ. : ಮೈಸೂರು ವಿಶ್ವವಿದ್ಯಾಲಯ. ಮೈಸೂರು.

೮. ಚನ್ನಣ್ಣ ವಾಲೀಕಾರ : ೧೯೯೦ : ಐದು ಸಮಾಜವಾದಿ ಕಾವ್ಯಗಳು : ಇಳಾ ಪ್ರಕಾಶನ, ಬೆಂಗಳೂರು.

೯. ತಿಪ್ಪೇರುದ್ರಸ್ವಾಮಿ.ಹೆಚ್: : ಉತ್ತರ ಕರ್ನಾಟಕದ ಅನುಭಾವಿ ಕವಿಗಳು : ಪ್ರಸಾರಾಂಗ, ಧಾರವಾಡ ವಿಶ್ವವಿದ್ಯಾಲಯ.

೧೦. ಧಾರವಾಡಕರ. ರಾ.ಯ. : ೧೯೭೫ : ಹೊಸಗನ್ನಡ ಸಾಹಿತ್ಯದ ಉದಯಕಾಲ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೧. ನರಸಿಂಹಾಚಾರ್ ಡಿ. ಎಲ್. ೧೯೭೧ : ಪೀಠಿಕೆಗಳು ಲೇಖನಗಳು : ಡಿವಿಕೆ ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು.

೧೩. ನರಸಿಂಹಾಚಾರ್ಯ. ಆರ್. ೧೯೬೪ : ಕರ್ನಾಟಕ ಕವಿ ಚರಿತೆ : ಭಾಗ ೨.ಕ.ಸಾ.ಪ. ಬೆಂಗಳೂರು.

೧೪. ನಾಗರಾಜ್ ಡಿ.ಆರ್. ೧೯೯೩: ಶಕ್ತಿ ಶಾರದೆಯ ಮೇಳ : ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

[illegible]

೧೬. ಪಂಡಿತಾರಾಧ್ಯ, ಎಂ.ಎಸ್.ವಿ.:೧೯೫೦ : ಹಟ್ಟಿಯಂಗಡಿ ನಾರಾಯಣರಾಯರ ಆಂಗ್ಲ ಕವಿತಾವಳಿ, ಪ್ರಬೋಧ ಪುಸ್ತಕಮಾಲೆ, ಮೈಸೂರು.

೧೭. ಪ್ರಭುಶಂಕರ : ೧೯೬೬ : ಕನ್ನಡದಲ್ಲಿ ಭಾವಗೀತೆ : ಡಿ.ವಿ.ಕೆ.ಮೂರ್ತಿ ಮೈಸೂರು.

೧೮. ಮಲ್ಲಿಕಾರ್ಜುನ ಲಠ್ಠೆ : ೧೯೮೨ : ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರ ವಚನಗಳು ವೀರಶೈವ ಅಧ್ಯಯನ ಸಂಸ್ಥೆ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ.

೧೯. ಮಾಳವಾಡ ಸ.ಸ.: ೧೯೬೦ : ಸಾಹಿತ್ಯ ಸಂಗಮ : ಧಾರವಾಡ.

೨೦. ಮಾಸ್ತಿ :೧೯೬೯ : ಆರಂಭದ ಆಂಗ್ಲ ಸಾಹಿತ್ಯ ಮತ್ತು ನಮ್ಮ ಸಾಹಿತ್ಯದ ಆರಂಭ : ಜೀವನ ಕಾರ್ಯಾಲಯ,ಬೆಂಗಳೂರು.

೨೧. ಮುತ್ತಣ್ಣ ಐ.ಮಾ. ೧೯೬೯ : ಹತ್ತೊಂಬತ್ತನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ : ಆರ್.ಎಸ್.ಪಬ್ಲಿ. ಮೈಸೂರು.

೨೨. ಮೂರ್ತಿರಾವ್. ಎ.ಎನ್.: ೧೯೬೫ : ಬಿ.ಎಂ.ಶ್ರೀಕಂಠಯ್ಯ : ಕ.ಸಾ.ಪ. ಬೆಂಗಳೂರು.

೨೩. ರಂಗನಾಥರಾವ್. ಜಿ.ಎಸ್. ೧೯೬೪ : ಹೊಸ ತಿರುವು : ಅಕ್ಷರ ಪ್ರಕಾಶನ, ಸಾಗರ.

೨೪. ರಾಘವೇಂದ್ರರಾವ್. ಎಚ್.ಎಸ್.:೧೯೮೮ ನಿಲುವು;ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್. ಬೆಂಗಳೂರು.

೨೫. ರಾಘವೇಂದ್ರರಾವ್. ಎಚ್.ಎಸ್. : ೧೯೯೫ : ಹಾಡೇಹಾದಿಯ ತೋರಿತು;ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.

೨೬. ವೆಂಕಟಾಚಲ ಶಾಸ್ತ್ರಿ, ಟಿ.ವಿ :೧೯೮೬ : ಎಸ್.ಜಿ. ನರಸಿಂಹಾಚಾರ್ಯರ ಕವಿತೆಗಳು :

ವಿಚಿಕಿಚಿ ಪ್ರಕಾಶನ, ಬೆಂಗಳೂರು.

೨೭. ಶಾಸ್ತ್ರಿ ಮಠ ಎಂ.ಜಿ. : ೧೯೯೨ : ಕೂಡಲೂರು ಬಸವ ಲಿಂಗ ಶರಣರು (ಒಂದು

ಅಧ್ಯಯನ) ಪ್ರಸಾರಾಂಗ, ಕರ್ನಾಟಕ ವಿ.ವಿ. ಧಾರವಾಡ.

೨೮. ಶಿವರುದ್ರಪ್ಪ ಜಿ.ಎಸ್.:೧೯೮೯: ಕನ್ನಡ ಕವಿಗಳ ಕಾವ್ಯ ಕಲ್ಪನೆ ; ಮಾನಸ ಗಂಗೋತ್ರಿ

ಮೈಸೂರು.

೨೯. ಶಿವರುದ್ರಪ್ಪ ಜಿ.ಎಸ್. ೧೯೮೧ : ನವೋದಯ; ನೆಲಮನೆ ಪ್ರಕಾಶನ.ಕೆ.ಜಿ.ಕೊಪ್ಪಲು

ಮೈಸೂರು.

೩೦. ಶಿವರುದ್ರಪ್ಪ ಜಿ.ಎಸ್. ೧೯೮೨ : ಭಾರತೀಯತೆ ಮತ್ತು ಕನ್ನಡ ಲೇಖಕ;ಬೆಂಗಳೂರು

ವಿಶ್ವವಿದ್ಯಾಲಯ, ಬೆಂಗಳೂರು.

೩೧. ಶಿವರುದ್ರಪ್ಪ ಜಿ.ಎಸ್.: ೧೯೮೯ : ಬೆಡಗು : ಸುವಿದ್ಯಾ ಪ್ರಕಾಶನ,ಬೆಂಗಳೂರು.

೩೨. ಶಿವರುದ್ರಪ್ಪ ಜಿ.ಎಸ್.:೧೯೬೫ : ಕನ್ನಡ ಸಾಹಿತ್ಯ ಚರಿತ್ರೆ : ಬೆಂಗಳೂರು ವಿ.ವಿ.

, ೩೩. ಶಿವಾನಂದ ಗುಬ್ಬಣ್ಣವರ್ :೧೯೯೩: ರಾಷ್ಟ್ರೀಯತೆ ಮತ್ತು ದಾವಣಿ ಸಾಹಿತ್ಯ.

೩೪. ಶ್ರೀನಿವಾಸ ಹಾವನೂರ :೧೯೬೪ :ಹೊಸಗನ್ನಡದ ಅರುಣೋದಯ: ಕನ್ನಡ ಅಧ್ಯಯನ ಸಂಸ್ಥೆ,

ಮೈಸೂರು.

೩೫. ಶ್ರೀನಿವಾಸ ಹಾವನೂರ : ೧೯೮೨ : ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ, ಹರಿಗಥೆ, ಕಂಪ್ಯೂಟರ್

ಇತ್ಯಾದಿ, ಅನನ್ಯ ಪ್ರಕಾಶನ, ಮೈಸೂರು.

೩೬. ಶ್ರೀ ಶತಮಾನೋತ್ಸವ ಸಂಚಿಕೆ: ೧೯೮೫ : ಶ್ರೀಗಂಧ ೫೪, ಅರವಿಂದ ೩ನೆ ಕ್ರಾಸ್, ಗವೀಪುರಂ,

ಬೆಂಗಳೂರು.

›೩೭. ಶ್ರೀ ಸ್ಮಾರಕ ಪ್ರತಿಷ್ಠಾನ: ಇಂಗ್ಲೀಷ್ ಗೀತಗಳು : ಗವೀಪುರಂ, ಬೆಂಗಳೂರು.

೩೮. ಸೀತಗಿರಿರಾವ್ ಎಲ್.ಎಸ್. ೧೯೬೫ : ಹೊಸಗನ್ನಡ ಸಾಹಿತ್ಯ : ಬೆಂಗಳೂರು ವಿ.ವಿ.

೩೯. ಸಂಗ್ರಹ ಲೇಖನ ಬಿ.ಎಂ. ಶ್ರೀ. ಅವರ ಬರುಕು ಬರಹ, ಕ.ಸಾ.ಪ. ಬೆಂಗಳೂರು.

೪೦. ಸೀತಾರಾಮಯ್ಯ ವಿ. ೧೯೭೦ : ಹಿರಿಯರು ಗೆಳೆಯರು, ಗೀತಾ ಬುಕ್ ಹೌಸ್,
ಮೈಸೂರು.

೪೧. ಸೀತಾರಾಮಯ್ಯ ವಿ. ೧೯೬೦ : ಕನ್ನಡ ಬೆಳಕು : ಸಾಹಿತ್ಯ ಪರಿಷತ್ತಿನ ಸುವರ್ಣ
ಮಹೋತ್ಸವದ ನೆನಪಿನ ಸಂಪುಟ ಕ.ಸಾ.ಪ. ಬೆಂಗಳೂರು.

೪೨. ಸಿದ್ಧಲಿಂಗಯ್ಯ ಜಿ. ಎಸ್. ೧೯೮೮ : ಹೊಸಗನ್ನಡ ಕಾವ್ಯ; ಬೆಂಗಳೂರು ವಿ.ವಿ. ಬೆಂಗಳೂರು.

೪೩. ಸುಬ್ಬರಾಯ ಚೊಕ್ಕಾಡಿ : ೧೯೭೭ : ದಕ್ಷಿಣ ಕನ್ನಡ ಕಾವ್ಯ : ಕನ್ನಡ ಸಂಘ, ಕಾಂತಾವರ.

೪೪. ಹರಿಕೃಷ್ಣ ಭರಣ್ಯ : ೧೯೭೮ : ಹೊಸಗನ್ನಡ ಸಾಹಿತ್ಯದ ಆರಂಭ; ಮದ್ರಾಸ್ ವಿ.ವಿ. ಮದ್ರಾಸು.

೪೫. ಹಂಪಿ, ಬಿರಾದಾರ, ಲಠ್ಠೆ : ೧೯೮೩ : ಹರದೇಶಿ - ನಾಗೇಶಿ, ಕನ್ನಡ ಅಧ್ಯಯನ ವಿಭಾಗ
ಗುಲ್ಬರ್ಗಾ ವಿ.ವಿ. ಗುಲಬರ್ಗಾ.

೪೬. ಹೆಗಡೆ ಎಸ್. ಕೆ., ಭಟ್ಟ ಬಿ.ಎಸ್. ೧೯೭೯ : ಉತ್ತರ ಕನ್ನಡ ಜಿಲ್ಲೆಯ ಗ್ರಂಥಕಾರರು.

## ಪತ್ರಿಕೆಗಳು

### ಅ) 'ಪ್ರಬುದ್ಧ ಕರ್ಣಾಟಕ'

೧. ''ಕನ್ನಡ ಕಾವ್ಯದಲ್ಲಿ ಪ್ರತಿಮೆ'' - ಪ್ರಭುಶಂಕರ, ಸಂಪುಟ ೪೦ - ಸಂಚಿಕೆ ೨.

೨. ''ಕವಿಯ ಜೀವನ ದೃಷ್ಟಿ ಮತ್ತು ಕಾವ್ಯದೃಷ್ಟಿ'' - ಕುವೆಂಪು. ಸಂಪುಟ ೩೭ -
ಸಂಚಿಕೆ ೩.

೩. ''ಮುಂದಿನ ಸಾಹಿತ್ಯದಲ್ಲಿ ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ'' - ಕುವೆಂಪು.
ಸಂಪುಟ ೩೭ - ಸಂಚಿಕೆ ೩.

೪. ''ಸಂಸ್ಕೃತಿ ಮತ್ತು ಅದರ ಪ್ರಸಾರೋದ್ಯಮ'' - ಪ್ರೊ. ಎಲ್. ಶ್ರೀಕಂಠಯ್ಯ.
ಸಂಪುಟ ೩೭ - ಸಂಚಿಕೆ ೧. - ಸಂಚಿಕೆ ೨.

೫. ''ಕಾವ್ಯ ಮತ್ತು ನೀತಿಬೋಧೆ'' - ಯು.ಕೆ. ಸುಬ್ಬರಾಯಾಚಾರ್.
ಸಂಪುಟ ೩೫ - ಸಂಚಿಕೆ ೧.

೬. ''ಸಾಹಿತ್ಯ ಚರಿತ್ರೆಯ ಸ್ವರೂಪ'' - ಡಿ.ಎಲ್. ನರಸಿಂಹಾಚಾರ್.

ಸಂಪುಟ ೩೦ - ಸಂಚಿಕೆ ೧.

೭. ''ನಮ್ಮ ಸಾಹಿತ್ಯ''(ಒಂದು ಭಗೀರಥ ವಿಮರ್ಶೆ) ಆರ್. ವಿ. ಜಾಗಿರದಾರ್.

ಸಂಪುಟ ೨೫ - ಸಂಚಿಕೆ ೧.

೮. ''ಹೊಸಕಾವ್ಯದ ಗದ್ಯತನ'' - ರಂ.ಶ್ರೀ. ಮುಗಳಿ. ಸಂಪುಟ ೧೭ - ಸಂಚಿಕೆ ೨.

೯. ''ಶ್ರೀಕಂಠಯ್ಯ ನೆನಪಿನ ಸಂಚಿಕೆ'' ಸಂಪುಟ ೬೫ - ಸಂಚಿಕೆ ೪.

೧೦. ''ಪಂಜೆಯವರ ಕವಿತೆಗಳು ( ವಿಮರ್ಶೆ )'' - ನಿಸ್ಸಾರ್ ಅಹಮ್ಮದ್.

ಸಂಪುಟ ೫೫ - ಸಂಚಿಕೆ ೩.

## ೪. 'ಜೀವನ'

೧. ''ಕನ್ನಡ ನುಡಿಯ ಹರಿದಾಸ - ಬಿ. ಎಂ. ಶ್ರೀ.'' - ಗೊರೂರು. ಫೆಬ್ರವರಿ : ೧೯೬೫.

೨. ''ದೇವರನ್ನು ಅರಿಯಲು ಸೂಫಿ ಸಿದ್ಧಾಂತ ತೋರಿದ ಹಾದಿ'' - ಮಹಮ್ಮದ್ ಷೌಕತ್ ಅಲಿ.

ಮೇ : ೧೯೬೨.

೩. ''ಕನ್ನಡ ಜಾನಪದ ಸಾಹಿತ್ಯ'' - ಟಿ.ಎಚ್. ಹೊನ್ನಗಂಗಪ್ಪ. ಮಾರ್ಚ್ : ೧೯೬೯.

೪. ''ಒಂದು ಸ್ಮರಣೀಯ ಸಂದರ್ಶನ'' - ವಿ. ಸೀತಾರಾಮಯ್ಯ. ಆಗಸ್ಟ್ : ೧೯೬೮.

೫. ''ಮಧುರ ಚೆನ್ನ:ವ್ಯಕ್ತಿ ಹಾಗೂ ಕೃತಿ'' - ರಂ.ಶ್ರೀ. ಮುಗಳಿ. ಜೂನ್ : ೧೯೬೮.

೬. ''ಪಂಜೆ ಸಾಹಿತ್ಯ ಸೇವೆ'' - ಪಡುಕೋಣೆ ರಾಮಾನಂದರಾಯರು. ಮಾರ್ಚ್ : ೧೯೬೮.

೭. ''ಶಾಂತಕವಿಗಳ ಸಾಹಿತ್ಯ ಸೇವೆ'' - ಕಸ್ತೂರಿ. ಫೆಬ್ರವರಿ : ೧೯೬೮.

೮. ''ರಾ. ನರಸಿಂಹಾಚಾರ್ ಅವರ ಸಾಹಿತ್ಯ ಸೇವೆ'' - ಕಸ್ತೂರಿ. ಜುಲೈ : ೧೯೬೭.

೯. ''ಕನ್ನಡ ಕುಲಪುರೋಹಿತರೊಂದಿಗೆ ಒಂದು ಗಂಟೆ'' - ವಸಂತ ಕುಷ್ಟಗಿ.

ಏಪ್ರಿಲ್ : ೧೯೬೭.

## ಅಂಕಣ

೧. ''ಇಂದಿನ ಭಾರತೀಯ ಸಾಹಿತ್ಯದ ಸ್ಥಿತಿಗತಿ'' - ಬಿ.ಸಿ. ನವೆಂಬರ್ : ೧೯೮೦.

೨. ''ನಾನು ಮತ್ತು ನನ್ನ ಸಾಹಿತ್ಯ ದೃಷ್ಟಿ'' - ಎಚ್.ಎಸ್. ರಾಘವೇಂದ್ರರಾವ್. ಜನವರಿ : ೧೯೮೩.

೩. ''ನಮ್ಮ ಮೇಷ್ಟ್ರು ಪಿ.ಸಿ.'' - ಪಿ. ಆರ್. ರಾವ್. ಸೆಪ್ಟೆಂಬರ್ : ೧೯೮೩.

೪. ''ಗದ್ಯದಲ್ಲಿ ಗರಿಬಿಚ್ಚುವ ಪದ್ಯ : ಹೊಸ ಕಾವ್ಯದ ಕೌತುಕ'' - ಜಿ.ಪಿ. ಬಸವರಾಜ್. ನವೆಂಬರ್ - ಡಿಸೆಂಬರ್ : ೧೯೮೪.

೫. ''ಕಾವ್ಯದ ವರ್ಗ ಪಟಲದ ಕೆಲವು ಟಿಪ್ಪಣಿಗಳು'' - ಹೆಚ್.ಎಸ್. ರಾಘವೇಂದ್ರರಾವ್. ಮಾರ್ಚ್ - ಏಪ್ರಿಲ್ : ೧೯೮೬.

೬. ''ತೀ.ನಂ.ಶ್ರೀ. ಸಾಹಿತ್ಯ ಚಿಂತನೆಗಳು'' - ಕೆ.ವಿ. ನಾರಾಯಣ. ನವೆಂಬರ್ - ಡಿಸೆಂಬರ್ : ೧೯೮೬.

## ಕ್ರೈಸ್ತ ಸಾಹಿತ್ಯ ಕುರಿತ ಲೇಖನಗಳು

೧. ಜೋಗುಳ ಜೆ.ಎಂ. ''ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ'', 'ಕನ್ನಡ ಸಂದೇಶ' (ಪತ್ರಿಕೆ) ಸಂಪುಟ ೩. ಸಂಚಿಕೆ ೫.

೨. ವಿಲ್ಯಂ. ಮಾಡ್ತಾ : ''ಕನ್ನಡ ಪ್ರಜ್ಞೆಗೆ ಕ್ರೈಸ್ತ ಮಿಶನರಿಗಳ ಕೊಡುಗೆ''. 'ಕನ್ನಡ ಸಂದೇಶ' (ಪತ್ರಿಕೆ) ಸಂಪುಟ ೩. ಸಂಚಿಕೆ ೫.

೩. ವೃಷಭೇಂದ್ರ ಸ್ವಾಮಿ ಎಸ್.ಎಂ. ''ಕನ್ನಡ ಸಾಹಿತ್ಯಕ್ಕೆ ಕ್ರೈಸ್ತರ ಕಾಣಿಕೆ''. 'ಕರ್ನಾಟಕ ಭಾರತಿ' ಸಂಪುಟ ೩೦. ಸಂಚಿಕೆ ೪.

೪. ಮರಿ ಜೋಸೆಫ್ : ''ಕ್ರೈಸ್ತ ಹಾಡುಗಳ ವಿಕಾಸ - ಲಯ ಸ್ವರೂಪ - ರೀತಿಯ ವಾದ್ಯ ಮತ್ತು ಸಂಗೀತದ ಅಳವಡಿಕೆ''. 'ಅನನ್ಯ'(ಅಖಿಲ ಕರ್ನಾಟಕ ಕ್ರೈಸ್ತ ಕನ್ನಡ ಸಾಹಿತ್ಯಗಳ ಶಿಬಿರದ ಸ್ಮರಣ ಸಂಚಿಕೆ)೧೯೯೧ - ೧೯೯೨.